# 'ಸಗರನಾಡಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು'
## ಒಂದು ಸಮಾಜ ಶಾಸ್ತ್ರೀಯ ಅಧ್ಯಯನ

(ಎಂ.ಫಿಲ್ ಪದವಿಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಶೋಧನಾ ಪ್ರಬಂಧ)


ಸಂಶೋಧಕರು

**ಉಪೇಂದ್ರಕುಮಾರ**

ಮಾರ್ಗದರ್ಶಕರು

**ಡಾ. ತಾರಿಹಳ್ಳಿ ಹನುಮಂತಪ್ಪ**

ಸಹಾಯಕ ಪ್ರಾಧ್ಯಾಪಕರು

ಮಾನವ ಶಾಸ್ತ್ರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಮಾನವ ಶಾಸ್ತ್ರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೦೯-೨೦೧೦

869A

# ‘ಸಗರನಾಡಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು’
## ಒಂದು ಸಮಾಜ ಶಾಸ್ತ್ರೀಯ ಅಧ್ಯಯನ

(ಎಂ.ಫಿಲ್ ಪದವಿಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಶೋಧನಾ ಪ್ರಬಂಧ)

ನೋಂದಣಿಸಂಖ್ಯೆ, ಕವಿ AS-00448,


ಸಂಶೋಧಕರು
**ಉಪೇಂದ್ರಕುಮಾರ**



ಮಾರ್ಗದರ್ಶಕರು
**ಡಾ. ತಾರಿಹಳ್ಳಿ ಹನುಮಂತಪ್ಪ**
ಅಧ್ಯಾಪಕರು
ಮಾನವ ಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





ಸಮಾಜವಿಜ್ಞಾನಗಳ ನಿಕಾಯ
**ಮಾನವ ಶಾಸ್ತ್ರ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩೨೭೬
೨೦೦೯-೨೦೧೦




# ಸಂಶೋಧಕರ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಮಾನವ ಶಾಸ್ತ್ರ ಅಧ್ಯಯನ ವಿಭಾಗದ ಸಂಶೋಧನಾ ವಿದ್ಯಾರ್ಥಿಯಾದ ನಾನು ಡಾ. ತಾರಿಹಳ್ಳಿ ಹನುಮಂತಪ್ಪ ಅವರ ಮಾರ್ಗದರ್ಶನದಲ್ಲಿ **'ಸಗರ ನಾಡಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು' ಒಂದು ಸಮಾಜ ಶಾಸ್ತ್ರೀಯ ಅಧ್ಯಯನ'** ಕೈಗೊಂಡು ಈ ಸಂಪ್ರಬಂಧವನ್ನು ಸಿದ್ಧಪಡಿಸಿದ್ದು ಇದುನನ್ನ ಮುಖ್ಯ ಸಂಶೋಧನಾ ಕೃತಿಯಾಗಿದೆ.

ಪ್ರಸ್ತುತ ಸಂಪ್ರಬಂಧವು ಎಲ್ಲೂ ಕೂಡಾ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕರು

ಸ್ಥಳ : ವಿದ್ಯಾರಣ್ಯ

ದಿನಾಂಕ : 8.9.10.

**ಉಪೇಂದ್ರ ಕುಮಾರ**
ಮಾನವ ಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಉಪೇಂದ್ರಕುಮಾರ್‌ರವರು ಬರೆದು ಸಾದರ ಪಡಿಸಿದ **'ಸಗರ ನಾಡಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು ಒಂದು ಸಮಾಜಶಾಸ್ತ್ರೀಯ ಅಧ್ಯಯನ'** ಎಂಬ ಸಂಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದೆ. ಶ್ರೀ ಉಪೇಂದ್ರಕುಮಾರ ನನ್ನ ಮಾರ್ಗದಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಮಾನವಶಾಸ್ತ್ರ ಅಧ್ಯಯನ ವಿಭಾಗದಲ್ಲಿ ಈ ಸಂಶೋಧನೆಯನ್ನು ಕೈಗೊಂಡಿದ್ದಾರೆ.

ಈ ಸಂಪ್ರಬಂಧವು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿರುವುದಿಲ್ಲ ಎಂದು ಪ್ರಮಾಣಿಕರಿಸುತ್ತೇನೆ.

T. Hottappa.

ಮಾರ್ಗದರ್ಶಕರು

**ಡಾ. ತಾರಿಹಳ್ಳಿ ಹನುಮಂತಪ್ಪ**

ಅಧ್ಯಾಪಕರು

ಮಾನವ ಶಾಸ್ತ್ರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 8.9.10.

# ಕೃತಜ್ಞತೆಗಳು

ನಮ್ಮ ಅಂತಕರಣದ ಅಭಿಮಾನದ ಕನ್ನಡ ವಿಶ್ವವಿದ್ಯಾಲಯ ಕುಲಪತಿಯಾದ ಸನ್ಮಾನ್ಯ ಎ.ಮುರಿಗೆಪ್ಪನವರಿಗೆ ಹಾಗೆಯೇ ಈ ವಿಶ್ವವಿದ್ಯಾಲಯದ ಮಾನ್ಯ ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿಯವರಿಗೆ ತುಂಬ ಹೃದಯದ ಕೃತಜ್ಞತೆಗಳು. ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿಯ ಶೋಧನೆ ಕೈಕೊಳ್ಳಲು ಅವಕಾಶ ಮಾಡಿಕೊಟ್ಟ ಅಧ್ಯಯನಾಂಗದ ನಿರ್ದೇಶಕರಾದ ಡಾ. ವೀರೇಶ ಬಡಿಗೇರ ಅವರಿಗೆ ಗೌರವ ಪೂವಕ ಕೃತಜ್ಞತೆಗಳು. ನನ್ನ ಈ ಪ್ರೌಢ ಪ್ರಬಂಧದ ಸಂಶೋಧನೆಯಲ್ಲಿ ನನ್ನ ತಿದ್ದಿ ತೀಡಿ ಈ ಪ್ರಬಂಧ ಮೂಡಿಬರಲು ಕಾರಣೀಕರ್ತರು ಮತ್ತು ಮಾರ್ಗದರ್ಶಕರಾದ ಮಾನವಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ತಾರಿಹಳ್ಳಿ ಹನುಮಂತಪ್ಪ ಅವರಿಗೆ ಅದೇ ವಿಭಾಗದ ಅಧ್ಯಾಪಕರಾದ ಡಾ.ಎಲ್. ಶ್ರೀವಾಸರವರಿಗೆ ಕೃತಜ್ಞತೆಗಳು.

ನನ್ನ ಈ ಸಂಶೋಧನೆಗೆ ಮತ್ತು ಸಂಶೋಧನೆಯನ್ನು ಕೈಗೊಳ್ಳಲು ದಾರಿದೀಪವಾದ ನನ್ನ ತಂದೆಯವರಾದ ಲಕ್ಷ್ಮಣ ಸುಕಬೇದಾರ ಮತ್ತು ತಾಯಿಯವರಾದ ವಿಜಯಲಕ್ಷ್ಮಿ ಸುಬೇದಾರ ಹಾಗೂ ನನ್ನ ಸಹೋದರರಾದ ವಿಜಯ ಕುಮ್ಮಾರ ಸುಬೇದಾರ. ಸಹೋದರಿಯಾದ ಚೇತನಾ ಹಣಮಂತರಾಉ ಮತ್ತು ಕನ್ಯಾಕುಮಾರಿ, ನನ್ನ ಅಜ್ಜಿಯವರಾದ ರಾಣಿ ಅಮ್ಮರಮ್ಮ ರಂಗಪ್ಪ ನಾಯಕ ಮತ್ತು ಕಾಲಾವತಿ ಅವರಿಗೂ ಹಾಗೂ ಚಿಕ್ಕಪ್ಪಂದಿರಾದ ಆರ್.ಕೆ. ಸುಬೇದಾರ, ವೈ.ಕೆ. ಸುಬೇದಾರ, ಈರಣ್ಣ ಸುಬೇದಾರ ಅವರುಗಳಿಗೆ ನನ್ನ ಪ್ರೀತಿ ಪೂರ್ವಕ ಕೃತಜ್ಞತೆಗಳು.

ಮಾನವಶಾಸ್ತ್ರ ವಿಭಾಗದ ನನ್ನವಿದ್ಯಾರ್ಥಿ ಮಿತ್ರರಾದ ಅನಿಲ ಕುಮಾರ, ಪ್ರಸನ್ನಕುಮಾರ, ರಾಘವೇಂದ್ರ ಹಾರಣಗೇರಾ ವಿಠಲಜೊಗಿನಕಟ್ಟಿ ಹಾಗೂ ಸೋಮರಾಯ ಬೆನಕಪ್ಪ ಅವರಿಗೆ ಈ ವಿಭಾಗ ಸಿಬ್ಬಂದ್ದಿಯಾದ ಪಂಪಾಪತಿ, ಗಾದಿಲಿಂಗಪ್ಪ, ಎಂ.ರಮೇಶಪ್ಪ, ತಿಂದಪ್ಪ ಅವರುಗಳಿಗೆ ಈ ಕೃತಿಯನ್ನು ಡಿ.ಟಿ.ಪಿ. ಮಾಡಿದ ಶ್ರೀ ಎಚ್.ಶರಣಬಸಪ್ಪ ಅವರಿಗೆ ಅತ್ಯಂತ ಸಂತಸದ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

ಉಪೇಂದ್ರಕುಮಾರ

# ಪರಿವಿಡಿ


| | |
|---|---|
| ಅಧ್ಯಾಯ ೧ | ಪುಟ |
| ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ | ೧-೬ |
| ಅಧ್ಯಾಯ ೨ | |
| ಸಗರನಾಡಿನ ಐತಿಹಾಸಿಕ ಹಿನ್ನೆಲೆ | ೭-೧೯ |
| ಅಧ್ಯಾಯ ೩ | |
| ಸಗರನಾಡಿನ ಬೇಡ ಸಮುದಾಯ | ೨೦-೩೬ |
| ಅಧ್ಯಾಯ ೪ | |
| ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು | ೩೭-೪೭ |
| ಅಧ್ಯಾಯ ೫ | ೪೮-೫೦ |
| ಉಪಸಂಹಾರ | |
| ಅನುಬಂಧಗಳು | ೫೧-೮೨ |
| ಗ್ರಂಥ ಋಣ | |
| ಛಾಯಾಚಿತ್ರಗಳು | |

# ಅಧ್ಯಾಯ ೧

# ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಸ್ವರೂಪ

**ಪೀಠಿಕೆ**

ಹೈದರಾಬಾದ್ ಕರ್ನಾಟಕದ ಸಗರನಾಡು ಎಂಬುದು ಇತಿಹಾಸ ಪ್ರಸಿದ್ಧ ಪ್ರದೇಶವಾಗಿದೆ. ಈ ನಾಡನ್ನು ಸಗರ ಚರ್ಕವರ್ತಿಯು ಆಳುತ್ತಿದ್ದರಿಂದ ಹಾಗೂ ಕೃಷ್ಣ ಮತ್ತು ಭೀಮ ನದಿಯ ನಡುವೆ ಇರುವ ಒಂದು ಭೂ ಪ್ರದೇಶಕ್ಕೆ ಸಗರನಾಡು ಎಂದು ಕರೆಯಲಾಯಿತು. ಈ ಸಗರನಾಡು ಸುರಪುರ, ಶಾಹಪುರ, ಜೇವರ್ಗಿ ತಾಲ್ಲೂಕುಗಳನ್ನು ಒಳಗೊಂಡಿದೆ. ಹೈದರಾಬಾದ್ ಕರ್ನಾಟಕ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತೀವ್ರ ಹಿಂದುಳಿದಿರುವ ಪ್ರದೇಶವಾಗಿದ್ದು, ಸ್ವತಂತ್ರ ಸಿಗುವುದಕ್ಕಿಂತಲೂ ಪೂರ್ವದಲ್ಲಿ ಈ ಪ್ರದೇಶ ನಿಜಾಮರ ಆಡಳಿತದಲ್ಲಿತ್ತು. ಅಂದಿನಿಂದಲೂ ಈ ಪ್ರದೇಶ ಎಲ್ಲಾ ಸೌಲಭ್ಯಗಳಿಂದ ವಂಚಿತವಾಗಿದೆ. ಅದರಲ್ಲಿಯೂ ಸಗರನಾಡು ತೀರ ಹಿಂದುಳಿದಿರುವ ನಾಡಾಗಿದೆ. ಸ್ವಾತಂತ್ರ್ಯ ನಂತರ ಸಹ ಇದು ಸರ್ಕಾರದ ನಿರ್ಲಕ್ಷ್ಯಕ್ಕೆ ಒಳಪಟ್ಟಿದೆ. ೧೯೪೮ ಸೆಪ್ಟೆಂಬರ್ ೧೮ರಂದು ಹೆಸರಿಗೆ ಮಾತ್ರ ನಿಜಾಮರ ರಾಜಶಾಹಿ ದುರಾಡಳಿತದಿಂದ ಮುಕ್ತವಾಯಿತು. ನಂತರವು ಒಂದಿಲ್ಲ ಒಂದು ಸ್ವರೂಪದ ಸಮಸ್ಯೆಗಳಲ್ಲಿಯೇ ಕೊಳೆತು ಅನ್ಯಾಯ, ಅತ್ಯಾಚಾರ, ದೌರ್ಜನ್ಯ, ಶೋಷಣೆಗಳಿಗೆ ಒಳಗಾಗುತ್ತಲೇ ಬಂದಿದೆ. ಆದ್ದರಿಂದ ರಾಜ್ಯಾಂಗದ ಅನುಚ್ಛೇದ ೩೭೧ರ ತಿದ್ದುಪಡಿಯಿಂದ ವಿಶೇಷ ಸ್ಥಾನ-ಮಾನದ ಕೂಗು ಕೇಳಿ ಬರುತ್ತಿದೆ. ಸಗರ ನಾಡು ವಿವಿಧ ರೀತಿಯ ಕುಲ, ಜಾತಿ, ಧರ್ಮ, ಮತಗಳನ್ನು ಹೊಂದಿದೆ. ಇದರಲ್ಲಿ ನಾಯಕ, ಬೇಡ ಸಮುದಾಯದ ಪ್ರಭಾವ ಅಧಿಕವಾಗಿದೆ. ಮೂಲತಃ ಕಾಡಿನಲ್ಲಿ ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿದ್ದು ಯಾರಿಗೂ ಅಂಜದವರನ್ನು 'ಬೇಡರು' ಎಂದು ಕರೆಯುವುದನ್ನು ಇತಿಹಾಸಸವೇ ಸ್ಪಷ್ಟಪಡಿಸಿದೆ.

ಈ ಸಮುದಾಯಕ್ಕೆ ಸರ್ಕಾರವು ಪರಿಶಿಷ್ಟ ಪಂಗಡದವರಿಗೆ ಸಿಗುವ ಎಲ್ಲಾ ರೀತಿಯ (ಮೀಸಲಾತಿ) ಸೌಲಭ್ಯಗಳನ್ನು ಕೊಟ್ಟರು ಕೂಡ. ಆ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಲಾಗದೆ ವಂಚಿತರಾಗಿದ್ದಾರೆ. ಇರುವ ಸೌಲಭ್ಯಗಳನ್ನು ಯಾವ ರೀತಿಯಾಗಿ ಉಪಯೋಗಿಸಿಕೊಳ್ಳಬೇಕು ಎಂಬ ಪ್ರಜ್ಞೆಯು ಕೂಡ ಇವರಿಗೆ

ಇಲ್ಲವಾಗಿದೆ. ಅದರಲ್ಲಿಯೂ ಮಹಿಳೆಯರಿಗೆ ಹೊರಗಿನ ಪ್ರಪಂಚದ ಸಾಮಾನ್ಯ ಜ್ಞಾನ ಕೂಡ ಇಲ್ಲ. ಪುರುಷರಿಗಿಂತ ಬೇಡ ಮಹಿಳೆಯರೆ ಅತೀ ಹೆಚ್ಚಿನ ಸಂಕಷ್ಟಗಳನ್ನು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಕರ್ನಾಟಕದಲ್ಲಿ ಮಾತ್ರವಲ್ಲದೇ ಇಡೀ ಭಾರತದಲ್ಲಿ ವಾಸವಾಗಿರುವ ಆದಿವಾಸಿ ಜನಾಂಗಳಲ್ಲಿ ಈ ಬೇಡ ಜನಾಂಗವು ಒಂದು. ನಮ್ಮ ದೇಶದಲ್ಲಿ ಪುರಾತನ ಕಾಲದಿಂದಲೂ ಈ ಜನಾಂಗ ಅಸ್ತಿತ್ವದಲ್ಲಿ ಇತ್ತು ಎಂಬ ಬಗೆಗೆ ಅನುಮಾನವಿಲ್ಲ. ಸಗರನಾಡು ಬೇಡರ ರಾಜ ಸಂಸ್ಥಾನವಾಗಿರುವುದರಿಂದ ಇಲ್ಲ ಇವರ ಜನಸಂಖ್ಯೆ ಬೆಳೆಯಲು ಕಾರಣವಾಯಿತು. ಬೇಡರಿಗೆ ಪರ್ಯಾಯ ಹೆಸರುಗಳೆಂದರೆ ನಾಯಕ, ಬೇಡ, ವಾಲ್ಮೀಕಿ, ಪರಿವಾರ, ತಳವಾರ, ಮಂಡಬೆಡರು, ವಾಲ್ಮೀಕಿ ಮಕ್ಕಳು, ಪುಳಿಂದ, ನಾಯರ್, ಇತ್ಯಾದಿ ಹೆಸರುಗಳಿಂದ ಬೇಡ ಸಮುದಾಯವನ್ನು ಕರೆಯುವುದುಂಟು. ನಾಯಕ, ವಾಲ್ಮೀಕಿ ಮತ್ತು ಬೇಡರು ಬೇಡಸಮುದಾಯದ ಮಹಾನಿಯರಲ್ಲಿ ಮಹರ್ಷಿ ವಾಲ್ಮೀಕಿ, ಮಹಾಭಕ್ತ ಬೇಡರಕಣ್ಣಪ್ಪ, ಏಕಲವ್ಯ, ಶಬರಿ, ಮದಕರಿನಾಯಕ ಸುರಪುರದ ಗಡ್ಡಿ ಪಿಚ್ಚನಾಯಕ ನಾಲ್ವಡಿ ರಾಜಾವೆಂಕಟಪ್ಪ ನಾಯಕ ಹರಪನಹಳ್ಳಿ ಪಾಳೆಗಾರರು, ಕನಕದಾಸ (ತಿಮ್ಮಪ್ಪನಾಯಕ) ಇನ್ನಿತರ ಮಹಾನ್ ಚೇತನಗಳು, ಕಲಿಗಳು ಈ ಸಮುದಾಯದಲ್ಲಿ ಹುಟ್ಟಿ ಈ ನಾಯಕ ಸಮಾಜವನ್ನು ಮೇಲೆತ್ತರಕ್ಕೆ ಕೊಂಡೊಯ್ಯುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದವರಾಗಿದ್ದಾರೆ. ಬೇಡರ ಹೆಣ್ಣು ಪುರುಷ ಕೇಂದ್ರಿತ ಸಮಾಜದಲ್ಲಿದ್ದಾಳೆ. ಇವಳಿಗೆ ಸ್ತ್ರೀವಾದ ಸ್ತ್ರೀಚಳುವಳಿ, ಇಂತಹ ಯಾವ ಸಿದ್ಧಾಂತಗಳ ಅರಿವುಗಳಿಲ್ಲ. ಬೇಡರ ಕೆಲವು ಹೆಣ್ಣುಮಕ್ಕಳು ಪುರುಷನಷ್ಟೆ ಸಮರ್ಥವಾಗಿ ಕೌಟುಂಬಿಕ ಜವಾಬ್ದಾರಿಯನ್ನು ಹೊಂದಿದ್ದರೂ ಕೆಲ ಕಾಲಘಟ್ಟದಲ್ಲಿ ಕಡೆಗಣನೆಗೆ ಒಳಗಾಗಿದ್ದಾಳೆ. ಪುರುಷ ಪ್ರಧಾನ ಸಮಾಜಿಕ ವ್ಯವಸ್ಥೆಯ ಬಂಧಿಯಾಗಿ ಸಮಾಜ ನೀಡಿದಂತಹ ಕೆಳಮಟ್ಟದ ಸ್ಥಾನಮಾನಗಳನ್ನು ಸ್ವೀಕರಿಸುತ್ತಾ ಬಂದಿದ್ದಾಳೆ. ಸಮಾಜದಲ್ಲಿ ಮತ್ತು ಕೌಟುಂಬಿಕ ಜೀವನದಲ್ಲಿ ಹೆಣ್ಣು ತಾಯಿಯಾಗಿ, ಹೆಂಡತಿಯಾಗಿ, ಮಗಳಾಗಿ, ಅತ್ತೆಯಾಗಿ, ಅತ್ತಿಗೆಯಾಗಿ, ನಾದಿನಿಯಾಗಿ, ಸೊಸೆಯಾಗಿ, ಹೀಗೆ ಇನ್ನು ಅನೇಕ ಪಾತ್ರಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ಸಮಾಜದಲ್ಲಿ ಬೇಡ ಮಹಿಳೆಯರು ಸೌಜನ್ಯಗಳಿಗೆ ಮತ್ತು ಶೋಷಣೆಗೆ ಒಳಗಾಗುತ್ತ ಬಂದಿದ್ದಾಳೆ. ಬಂಜೆಯಾದ ಬೇಡ ಮಹಿಳೆಯ ಬಗ್ಗೆ ಮತ್ತು ವಿಧವೆಗೆ ಗೌರವ ಕೊಡುವುದು ಕಮ್ಮಿ, ಬೇಡ ಸಮುದಾಯದಲ್ಲಿ ಗಂಡು ಜನನವಾದರೆ ತುಂಬ ಸಂತೋಷ ಪಡುತ್ತಾರೆ ಅದೇ ಹೆಣ್ಣು ಮಗುವಿನ ಜನನವಾದಗ ಸಂತೋಷವನ್ನು ಪಡುವುದಿಲ್ಲ. ಬೇಡರ ಮಹಿಳೆ ತನ್ನ ಕುಟುಂಬದ ಶ್ರೇಯಸ್ಸಿಗೆ ಹೆಚ್ಚು ಗಮನ ಕೊಡುತ್ತಾಳೆ. ಮತ್ತು ಹೊಲ, ಮನೆ, ಎನ್ನದೆ ನಿರಂತರವಾಗಿ ತನ್ನನ್ನು ತಾನು ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾಳೆ. ಈ ಮೂರು ತಾಲೂಕುಗಳ ಬೇಡ ಮಹಿಳೆಯರು ತೋಟಗಾರಿಕೆ, ಪಶುಪಾಲನೆ, ತರಕಾರಿ, ಹಣ್ಣಿನ ವ್ಯಾಪಾರ ಮತ್ತು ಹುಣಸೆ ಮರಗಳನ್ನು ಗುತ್ತಿಗೆ ಹಿಡಿದು ಬೇರೆ ರಾಜ್ಯಗಳಿಗೆ ಮಾರಾಟ ಮಾಡಿ ಬರುತ್ತಾರೆ. ಕೆಲವು ಕೈಗಾರಿಕೆಗಳಿಂದಲೂ ನಿರಂತರವಾಗಿ ಕೆಲಸ ಮಾಡುತ್ತಾಳೆ. ಸಗರನಾಡು ಶೈಕ್ಷಣಿಕವಾಗಿ ತೀರ ಹಿಂದುಳಿದಿರುವುದರಿಂದ ಬೇಡ ಸಮುದಾಯದ ಕೆಲವು ಪುರುಷರು ಕುಡುಕರಾಗಿದ್ದಾರೆ. ಜೂಜು ಕೊರರು ವ್ಯೆಬಿಚಾರಿಗಳಾಗಿದ್ದಾರೆ. ಕೊಲೆ ಗಡುಕರಾಗಿ ಅಪರಾಧಿಗಳಾಗಿ ಜೈಲಿಗೆ ಹೋದ

ಸಂದರ್ಭದಲ್ಲಿ ಮನೆಯ ಒಡೆತವನ್ನು ಬೇಡ ಮಹಿಳೆ ವಯಹಿಸಿಕೊಳ್ಳುತ್ತಾಳೆ. ಈ ಸಮುದಾಯದ ಮಹಿಳೆಯರಲ್ಲಿ ದೇವರು ಮತ್ತು ಧರ್ಮಗಳು ಜೀವನ ಉಸಿರುರಾಗಿದೆ. ಇಲ್ಲಿನ ಮುಗ್ಧ ಅನಕ್ಷರಸ್ಥ ಬಡಪಾಯಿ ಹೆಂಗಸರು ದೇವರು ಹೆಸರಿನಲ್ಲಿ ನೆಮ್ಮದಿ ಕಾಣುತ್ತಾರೆ. ಆಧುನಿಕ ಯುಗದಲ್ಲಿ ನಮ್ಮ ದೇಶ ಅಭಿವೃದ್ಧಿ ಪತದಲ್ಲಿ ಸಾಗುತ್ತಿದ್ದರು. ಸಗರನಾಡಿನ ಬೇಡ ಮಹಿಳೆಯರು ಇನ್ನೂ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಮುಖ್ಯವಾಗಿ ಬೇಡ ಮಹಿಳೆ ವಿಧವೆಯಾದರೆ ಪನರ್ ವಿವಾಹವಾಗುವುದಿಲ್ಲ ಒಂದು ವೇಳೆ ಆದರೂ ಸಾವಿರಕ್ಕೆ ಒದರಂತೆ ಕಂಡು ಬರುತ್ತದೆ. ಈ ಎಲ್ಲಾ ಸಮಸ್ಯೆಗಳನ್ನು ನೋಡಿದಾಗ ಬೇಡ ಮಹಿಳೆಯರು ಧೈರ್ಯವಂತರು ಸಹನೆವುಳ್ಳವರು ಎಂದು ಹೇಳಬಹುದು.

ಸುರಪುರದ ಇತಿಹಾಸದ ಪುಟಗಳನ್ನು ತೆರೆದು ನೋಡಿದಾಗ, ರಾಣಿಯರ ಧೈರ್ಯವಂತಿಕೆ ಸ್ವಾಭಿಮಾನವನ್ನು ಕೊಂಡಾಡಲೇಬೇಕಾಗುತ್ತದೆ. ಸಗರನಾಡಿನ ಬೇಡ ನಾಯಕರ ರಾಜಮನೆತನಗಳ್ಲಿ ರಾಜರಂತೆಯೇ ಅನೇಕ ಮಹಿಳಾ ರಾಣಿಯರು ಆಳ್ವಿಕೆಮಾಡಿದ ಕುರುಹುಗಳಿವೆ. ರಾಜ ಕಾರಣದಲ್ಲಿ ಭಾಗವಹಿಸುವುದಲ್ಲದೆ ರಾಜತಂತ್ರಗಳಿಗೆ ಸಂಬಂಧಿಸಿದ ವಿಷಯಗಳನ್ನು ರಾಜರೊಂದಿಗೆ ಚರ್ಚಿಸುತ್ತಿದ್ದರು. ರಾಜ್ಯಕ್ಕೆ ಅಥವಾ ಸಂಸ್ಥಾನಕ್ಕೆ ಸಂಬಂಧಿಸಿದ ಕೆಲವು ಮಹತ್ವ ಕಾರ್ಯಗಳಲ್ಲಿ ನೇರವಾಗಿ ಭಾವಹಿಸುವ ಹಕ್ಕು ರಾಣಿಯರಿಗೆ ಇರುತ್ತಿತ್ತು. ಹಾಗೂ ರಾಜರಿಗೆ ಪ್ರೋತ್ಸಾಹ ಸ್ಪೂರ್ತಿ ಹುಮ್ಮಸ್ಸು ಬರುವಂತೆ ನಡೆದುಕೊಳ್ಳುತ್ತಿದ್ದರು. ಇಂತಹ ರಾಣಿಯರಲ್ಲಿ ಸುರಪುರದ ರಾಣಿ ಅಮ್ಮನಾಗತಿ (ಅಪ್ಪನಾಗತಿ) ರಾಣಿಕಾಂತಮ್ಮ, ರಾಣಿ ಈಶ್ವರಮ್ಮ ಉದಾ: ರಾಜಾ ಕೃಷ್ಣಪ್ಪನಾಯಕ (ಕ್ರಿ.ಶ. ೧೮೨೭-೧೮೪೩ ನ್ನೂ) ಅನಾರೋಗ್ಯ ಪೀಡಿತನಾಗಿ (ಕ್ರಿ.ಶ. ೧೮೪೩ರಲ್ಲಿ) ತೀರಿಕೊಂಡನು. ಅನಂತರ ರಾಣಿ ಈಶ್ವರಮ್ಮ ಸುರಪುರ ಸಂಸ್ಥಾನದ ಅಧಿಕಾರದ ಗದ್ದುಗೆ ಏರಿ ಆಳ್ವಿಕೆ ಮಾಡಿ ಇಡೀ ಸೈನಿಕರನ್ನು ಬ್ರಿಟಿಷರ ವಿರುದ್ಧ ಸೆಣೆಸಲು ಅಣಿಗೊಳಿಸಿದ್ದು ಸಾಧಾರಣ ಮಾತಲ್ಲ ಅಂದು ರಾಣಿಯರಿಗೆ ಘೋಷಾಪದ್ಧತಿ ಕಟ್ಟುನಿಟ್ಟಾಗಿರುವ ಸಂದರ್ಭದಲ್ಲಿಯೂ ಈ ಮಹಿಳೆಯ ಹೋರಾಟ ಶ್ಲಾಘನಿಯವಾದದ್ದು ಇಂತಹ ಉದಾಹರಣೆಗಳು ಸಗರ ನಾಡಿನ ಬೇಡ ಮಹಿಳೆಯರಲ್ಲಿ ಒಂದಿಲ್ಲಾ ಒಂದು ರೀತಿಯಲ್ಲಿ ಕಾಣುತ್ತವೆ. ಪುರುಷರಲ್ಲಿ ಇರುವ ಧೈರ್ಯ, ಸಾಹಸ, ಎದೆಗಾರಿಕೆ, ಆತ್ಮವಿಶ್ವಾಸ, ಕರುಣೆ, ತ್ಯಾಗ ಬೇಡ ಮಹಿಳೆಯಲ್ಲಿ ಸಮಾನವಾಗಿ ಕಾಣಬಹುದು. ಇಷ್ಟೆಲ್ಲ ಬೇಡ ಮಹಿಳೆಯರ ಸಾಹಸದ ಘಟನೆಗಳು ಇದ್ದರು ಕೂಡಾ ಬೇಡ ಮಹಿಳೆ ಇತಿಹಾಸದುದ್ದಕ್ಕೂ ಅನೇಕ ಸಮಸ್ಯೆಗಳನ್ನು ಎದರಿಸುತ್ತಾ ಬಂದಿದ್ದಾಳೆ.

## ಅಧ್ಯಯನದ ಉದ್ದೇಶ

ಸುರಪುರ ಶಾಹಾಪೂರ, ಜೇವರ್ಗಿ ತಾಲ್ಲೂಕೂಗಳನ್ನು ಒಳಗೊಂಡಿರುವ ಸಗರನಾಡು ಅತಿ ಹೆಚ್ಚಿನ ಬೇಡರ ಸಮುದಾಯದ ಜನಸಂಖ್ಯೆಯನ್ನು ಹೊಂದಿದೆ. ಗುಲಬರ್ಗಾ ಜಿಲ್ಲೆಯ ಸುರಪುರ ಶಾಹಾಪೂರ

ತಾಲ್ಲೂಕಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳ ಬೇರೆ ಹಾಗೂ ಹೊಸ ಜಿಲ್ಲೆಯಾದ ಯಾದಗಿರಿಗೆ ಸೇರ್ಪಡೆಯಾಗಿರುವ ಜೇವರ್ಗಿ ತಾಲ್ಲೂಕಿನ ಸಮಸ್ಯೆಗಳೆ ಬೇರೆಯಾಗಿವೆ. ಉದಾಹರಣೆ ಸುರಪುರದಲ್ಲಿ ಘೋಷಪದ್ಧತಿಯಂತಹ ಪರದಾ ಪದ್ಧತಿ ಬೇಡ ಮಹಿಳೆಯ ಸಮಸ್ಯೆ ಜೇವರ್ಗಿ ತಾಲ್ಲೂಕಿನಲ್ಲಿ ಕಂಡುಬರುವುದಿಲ್ಲ. ಬೇರೆ ಜಾತಿಯ ಮಹಿಳೆಯ ಸಾಮಾಜಿಕ ಸಮಸ್ಯೆಗಳಿಗಿಂತ ಬೇಡಸಮುದಾಯದ ಮಹಿಳೆಯರ ಸಾಮಾಜಿಕ ಸಮಸ್ಯೆಗಳು ಅತಿ ಹೆಚ್ಚಾಗಿರುವದರಿಂದ ಅಧ್ಯಯನ ಕೈಗೊಳ್ಳಲು ಪ್ರಮುಖವಾದ ಉದ್ದೇಶವಾಗಿದೆ.

* ಸ್ವಾತಂತ್ರ್ಯ ಹೋರಾಟದಲ್ಲಿ ಬೇಡ ಮಹಿಳೆಯ ಪಾತ್ರ,
* ಚರಿತ್ರೆಯಲ್ಲಿ, ಎದುರಾಗಿರುವ ಮಹಿಳೆಯರ ಸ್ಥಾನಮಾನಗಳನ್ನು ಗ್ರಹಿಸುವುದು.
* ಸಗರನಾಡಿನಲ್ಲಿ ಬೇಡ ಸಮುದಾಯದ ಪ್ರಭಾವ.
* ಸಮಕಾಲೀನ ಸಂದರ್ಭದಲ್ಲಿ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾರ್ವತ್ರಿಕ ನೆಲೆಯಲ್ಲಿ ಮಹಿಳೆಯ ಚಹರೆಯನ್ನು ಗುರುತಿಸುವಿಕೆ.
* ಸಗರನಾಡಿನ ಪರಿಸರದಲ್ಲಿ ಬೇಡ ಬುಡಕಟ್ಟು ಮಹಿಳೆಯನ್ನು ಸಮಕಾಲೀನ ಸಮಸ್ಯೆಗಳಿಗೆ ಸಾಮಿಪ್ಯಗೊಳಿಸುವುದು.
* ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯ ಎದುರುಗೊಳ್ಳುತ್ತಿರು ಸಮಸ್ಯೆಗಳನ್ನು ವಿಮರ್ಶೆ ಗೊಳಪಡಿಸುವುದು.
* ಸಗರನಾಡು ಇತಿಹಾಸ ಪ್ರಸಿದ್ಧ ನಾಡು ಎಂಬ ಉದ್ದೇಶದಿಂದ
* ಸಗರನಾಡಿನ ಬೇಡರ ಸಂಸ್ಕೃತಿ ಸಂಪ್ರದಾಯ ಆಚರಣೆಗಳು

ಇನ್ನು ಆಚರಣೆಯಲ್ಲಿರುವ ಬೇಡ ಮಹಿಳೆಯರ ಘೋಷಾಪದ್ಧತಿ ಒಂದು ಸಾಮಾಜಿಕ ಸಮಸ್ಯೆಯಾಗಿರುವದರಿಂದ. ಈ ಹಿನ್ನೆಲೆಯಲ್ಲಿ ಸಗರ ನಾಡಿನ ಬೇಡ ಮಹಿಳೆಯ ಸಾಮಾಜಿಕ ಸಮಸ್ಯೆಗಳನ್ನು ಕುರಿತು ನಿರಂತರವಾದ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

## ಅಧ್ಯಯನದ ವ್ಯಾಪ್ತಿ

ಸಗರನಾಡಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು ಎಂಬ ಪ್ರಬಂಧದ ಅಧ್ಯಯನ ಹೈದರಾಬಾದ್ ಕರ್ನಾಟಕದಲ್ಲಿರುವ ಸುಪ್ರಸಿದ್ಧ ಸಗರನಾಡಿನ ''ಸುರಪುರ, ಶಹಾಪೂರ, ಜೇವರ್ಗಿ ತಾಲ್ಲೂಕುಗಳ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ, ಆದರೆ ಪ್ರಸ್ತುತ ದಿನಮಾನಗಳಲ್ಲಿ ಗುಲ್ಬರ್ಗಾ ಜಿಲ್ಲೆಯ ಯಾದಗಿರಿ ತಾಲ್ಲೂಕು ಹೊಸ ಜಿಲ್ಲೆಯಾಗಿ ಘೋಷಣೆಯಾದ ನಂತರ ಸುರಪುರ ಶಹಾಪೂರ ಯಾದಗಿರಿ

ಜಿಲ್ಲೆಗೆ ಸೇರ್ಪಡೆಯಾದರೆ ಹಾಗೂ ಜೇವರ್ಗಿ ತಾಲ್ಲೂಕು ಗುಲಬರ್ಗಾ ಜಿಲ್ಲೆಯಲ್ಲಿಯೇ ಉಳಿದಿದೆ. ಒಟ್ಟಿನಲ್ಲಿ ತಾಲ್ಲೂಕುಗಳು ವಿಂಗಡಣೆಯಾದರು ಕೂಡ ಐತಿಹಾಸಿಕವಾಗಿ ಸಗರನಾಡು ಈ ಮೂರು ತಾಲ್ಲೂಕುಗಳನ್ನು ಒಳಗೊಂಡಿದೆ. ಕೃಷ್ಣಾನದಿಯಿಂದ ಭೀಮಾ ನದಿಯವರೆಗಿನ ಈ ಮೂರು ತಾಲ್ಲೂಕುಗಳು ಬರುವುದರಿಂದ ಮತ್ತೇ ಸುರಪುರ ಸಂಸ್ಥಾನದ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ಇದಕ್ಕೆ ಸಗರನಾಡೆಂದು ಕರೆಯಲಾಯಿತು. ಹಾಗಾಗಿ ಸಗರನಾಡಿನಲ್ಲಿ ಬರುವ ಸುರಪುರ ಜೇವರ್ಗಿ, ಶಹಾಪೂರ ಈ ಮೂರು ತಾಲ್ಲೂಕುಗಳ ಒಳಗೊಂಡ ಅಧ್ಯಯನ ಮತ್ತು ವ್ಯಾಪ್ತಿಯ ಪರಿಮಿತಿಯಾಗಿದೆ.

**ಅಧ್ಯಯನ ಸ್ವರೂಪ**

ಎಂ.ಫಿಲ್ ಪ್ರಬಂಧದ ಅಧ್ಯಯನದ ಸ್ವರೂಪವು ಐದು ಅಧ್ಯಯನ ಒಳಗೊಂಡಿದೆ. ಎಂ.ಫಿಲ್ ಪ್ರಬಂಧದ ಪೌಢ ಪ್ರಬಂಧವು ಅಚ್ಚುಕಟ್ಟಾಗಿ ಮಂಡಿಸಲು ಐದು ಅಧ್ಯಾಯನಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಪ್ರಬಂಧ ಚೌಕಟ್ಟು ಅಧ್ಯಯನ ಉದ್ದೇಶ ಅಧ್ಯಯನ ವ್ಯಾಪ್ತಿ ಮತ್ತು ಅಧ್ಯಯನ ಸ್ವರೂಪವನ್ನು ಒಳಗೊಂಡಂತೆ ಸಗರ ನಾಡಿನ ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳನ್ನು ಈ ಐದು ಅಧ್ಯಯನದಲ್ಲಿ ಸೆರೆ ಹಿಡಿಯಲಾಗಿದೆ. ಬಹಳ ದಿನಗಳಿಂದ ಈ ಕುರಿತು ಅಧ್ಯಯನ ಮಾಡಬೇಕೆಂಬ ನನ್ನ ಹಂಬಲ ಚಿಕ್ಕವಯಸ್ಸಿನಿಂದಲು ನನ್ನನ್ನು ಆಗಾಗ ಅತಿಯಾಗಿ ಕಾಡುತಿರುವ ಹಿನ್ನೆಲೆಯಲ್ಲಿ ಈ ಕುರಿತು ಅಧ್ಯಯನ ಮಾಡಬೇಕೆಂಬ ಅಪೇಕ್ಷೆ ನನಗೆ ಬಲವಾಗಿ ಕಾಡಿದ ಹಿನ್ನೆಲೆಯಲ್ಲಿ ಈ ಸಂಶೋಧನಾ ವಿಷಯವನ್ನು ಕೈಗೊಂಡಿದ್ದೇನೆ. ನನ್ನ ಈ ಪ್ರಬಂಧದ ಇತಿಮಿತಿಯಲ್ಲಿ ಐದು ಅಧ್ಯಯನವನ್ನು ಮಾಡಿಕೊಂಡು ಅದರಲ್ಲಿಯ ಸಂಕ್ಷಿಪ್ತವಾದ ಸಂಶೋಧನೆಗೆ ದಾರಿಯನ್ನು ಕಂಡುಕೊಂಡಿದೆ. ಈ ಪ್ರಬಂಧ ಐದು ಅಧ್ಯಯನವು ಕೆಳಕಂಡಂತಿವೆ. ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಸ್ವರೂಪಕ್ಕೆ ಸಂಬಂದಿಸಿದಂತೆ ಅಧ್ಯಯನ ಮಾಡಿದ್ದೇನೆ.

ಎರಡನೆಯ ಅಧ್ಯಯನದಲ್ಲಿ ಸಗರ ನಾಡಿನ ಐತಿಹಾಸಿಕ ಹಿನ್ನೆಲೆಯ ಕುರಿತ ಸಂಕ್ಷಿಪ್ತ ಮಾಹಿತಿಯನ್ನು ಸಂಶೋಧನೆಯನ್ನು ಈ ಅಧ್ಯಯನದಲ್ಲಿ ಸೆರೆ ಹಿಡಿಯುವ ಪ್ರಯತ್ನ ಮಾಡಿದ್ದೆನೆ.

ಸಗರ ಚಕ್ರವರ್ತಿಯಬಗ್ಗೆ ಮತ್ತು ರಾಷ್ಟ್ರಕೂಟ ಚಾಲುಕ್ಯರ ಶಾಸನಗಳ ಬಗೆ ಸುರಪುರ ಸಂಸ್ಥಾನದ ರಾಜರ ಬಗ್ಗೆ, ಐತಿಹಾಸಿಕ ಕೋಟೆ ಕೊತ್ತಲ ಬಗ್ಗೆ, ದೇವಾಸ್ಥಾನ ಬಗ್ಗೆ, ಜನಪದ ಮತ್ತು ಸಂಸ್ಕೃತಿಯನ್ನು ಪರಿಚಯಿಸುವ ಪ್ರಯತ್ನವನ್ನು ಈ ಅಧ್ಯಯನದ ಮೂಲಕ ಕಂಡುಕೊಂಡಿದ್ದೇನೆ.

ಮೂರನೆಯ ಅಧ್ಯಯನದಲ್ಲಿ ಸಗರನಾಡಿನ ಬೇಡ ಸಮುದಾಯದ ಕುರಿತು ಸಂಶೋಧನೆ ಕೈಗೊಂಡಿರುತ್ತೇನೆ. ಅಲ್ಲಿಯ ಬೇಡ ಸಮುದಾಯದ ಹಿಂದಿನ ದಿನಮಾನದ ಸ್ಥಿತಿಗತಿಗಳು ಹಾಗೂ ಜಾಗತೀಕರಣದ ಸಂದರ್ಭದ ಇಂದಿನ ಸ್ಥಿತಿ-ಗತಿಯನ್ನು ಕುರಿತು ಅವರ ಬದಕು, ಬವಣೆ, ಸಂಸ್ಕೃತಿ, ಕೃಷಿ, ಉದ್ಯೋಗ, ವೃತ್ತಿ ಮಹಿಳೆಯರ

ಸ್ಥಾನಮಾನಗಳು ಮತ್ತು ಬದುಕಿನಲ್ಲಿ ಬರುವ ದುಃಖ ದುಮ್ಮಾನಗಳು ಮಾನಸಿಕ ತೊಳಲಾಟಗಳು ಸಾಮಾಜಿಕ ಸಮಸ್ಯೆಗಳು ಸಾಮಾಜಿಕ ಬಹಿಸ್ಕಾರ ಅವರ ಜೀವನ ವರ್ತನೆಗಳು, ಹಬ್ಬ ಹರಿದಿನ, ಜಾತ್ರೆ, ಉತ್ಸವಗಳು, ಬೇಡರ ಮಹಿಳೆಯರ ಬದುಕಿನಲ್ಲಿ ಆದ ಆಧುನಿಕ ಸ್ಥಿತ್ಯಂತರಗಳು ಇತ್ಯಾದಿ, ಹಬ್ಬ ಕುರಿತು ಈ ಅಧ್ಯಯನದಲ್ಲಿ ಸಮಗ್ರವಾದ ನೋಟವನ್ನು ಕಂಡುಕೊಳ್ಳಲಾಗಿದೆ.

ನಾಲ್ಕನೆಯ ಅಧ್ಯಯನದಲ್ಲಿ ಬೇಡ ಮಹಿಳೆಯ ಸಾಮಾಜಿಕ ಸಮಸ್ಯೆಗಳು ಕುರಿತು ಸುಧೀರ್ಘವಾಗಿ ಚರ್ಚಿಸಲಾಗಿದೆ. ಹೆಣ್ಣು ಮಗುವಿನ ಜನನ, ಬಾಲ್ಯ, ವಂಚನೆ, ಮಹಿಳೆಯರ ಸ್ಥಾನಮಾನ, ಅವರ ವೃಧ್ಯಾಪ್ಯ ಜೀವನ, ಅವರಲ್ಲಿ ಕಂಡುಬರುವ ಸಾಮಾಜಿಕ ಅನಿಷ್ಠ ಪದ್ಧತಿಗಳು ಸಾಮಾಜಿಕ ಸಮಸ್ಯೆಗಳು ಮುಂದೆ ಹುಟ್ಟಿಬರುವ ಗುರುತರವಾದ ಸಮಸ್ಯೆಗಳ ಕುರಿತು. ಈ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಈ ಪ್ರಬಂಧದ ಹಿನ್ನೆಲೆಯಲ್ಲಿ ಈ ಅಧ್ಯಯನ ಸಮಗ್ರತೆಯನ್ನು ಕಾಪಾಡುವ ಪ್ರಯತ್ನ ಮಾಡಿದೆ.

ಕೊನೆಯ ಅಧ್ಯಯನವಾಗಿ ಉಪಸಂಹಾರ ಇದರಲ್ಲಿ ಅಧ್ಯಯನ ಉದ್ದೇಶ ವ್ಯಾಪ್ತಿ ಸ್ವರೂಪ ಸಗರನಾಡಿನ ಐತಿಹಾಸಿಕ ಹಿನ್ನೆಲೆ, ಬೇಡಸಮುದಾಯ ವೇಷ ಭೂಷಣಗಳು, ಮಹಿಳೆಯರ ಸಾಮಾಜಿಕ ಸಮಸ್ಯೆಗಳು. ಹಿಂದಿನ ಕಾಲದ ಜನ ಜೀವನ, ಅಲ್ಲಿಯ ವ್ಯವಸ್ಥೆ, ಐತಿಹಾಸಿಕ ಹಿನ್ನೆಲೆ ಮತ್ತು ಸಗರ ಚಕ್ರವರ್ತಿ ಮತ್ತು ಸುರಪುರ ಸಂಸ್ಥಾನ ರಾಜರ ಸಂಸ್ಕೃತಿ, ಅಂದಿನ ಮಹಿಳೆಯ ಸ್ಥಾನ ಮಾನ ಇಂದಿನ ಯಾತ್ರಿಕ ಜೀವನದ ಸಂದರ್ಭದಲ್ಲಿ ಮಹಿಳೆಯ ಸ್ಥಾನಮಾನ ಸಾಮಾಜಿಕ ಬಹಿಷ್ಕಾರ, ನಿಂದನೆ ಸಾಮಾಜಿಕ ಸಮಸ್ಯೆಗಳು, ಮಹಿಳೆಯ ಬಾಲ್ಯ, ಯವ್ವನ, ಮದುವೆ ಆಚರಣೆಗಳು, ವೃದ್ಯಾಪ ಜೀವನ ಕುರಿತು ಪ್ರಬಂಧ ಸ್ವರೂಪದಲ್ಲಿ ಎಲ್ಲಾ ಅಂಶಗಳನ್ನು ಸೇರೆ ಹಿಡಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮುಕ್ತಾಯಗೊಳಿಸುವ ಹಂತಕ್ಕೆ ಬಂದು ಈ ಪ್ರಬಂಧವನ್ನು ಪೂರ್ಣ ಪ್ರಮಾಣದಲ್ಲಿ ಸಿದ್ಧ ಪಡಿಸುವ ಬಯಕೆ ಬಹುಮುಖ್ಯವಾಗಿದೆ. ಅಧ್ಯಯನದ ಕೈಂಕಾರ್ಯ ನನ್ನ ಈ ಸಂಶೋಧನೆಯ ಬಹುಮುಖ್ಯ ತಿರುಳಾಗಿದೆ.

# ಅಧ್ಯಾಯ ೨

## ಸಗರನಾಡಿನ ಐತಿಹಾಸಿಕ ಹಿನ್ನೆಲೆ

ಪ್ರಾಚೀನ ಕಾಲದಿಂದಲೂ ಭರತ ಭೂಮಿ ಪುಣ್ಯಭೂಮಿ ಎಂದು ಖ್ಯಾತಿವೆತ್ತಿದೆ. ಇತಿಹಾಸದ ಪುಟಗಳನ್ನು, ತಿರುವಿದಾಗಲಂತೂ, ಸ್ವರ್ಗಾದಪಿಗರಿಯಸಿ ಎಂಬ ಮಾತು ಅಕ್ಷರಶ ನಿಜ. ಇಂತಹ ಪವಿತ್ರ ಭೂಮಿಯ ಒಂದು ಅವಿಭಾಜ್ಯ ಅಂಗವಾದ ಕನ್ನಡ ನಾಡು ಇತಿಹಾಸದುದ್ದಕ್ಕೂ ಅಷ್ಟು ಘನವೆತ್ತಿದ ನಾಡಾಗಿದೆ. ಅದರ ಪ್ರೀತಿಯವಾತ್ಸಲ್ಯದ ಮಗುವೆನಿಸಿದ ಸಗರನಾಡು ಪುಣ್ಯತೀರ್ಥ ಕ್ಷೇತ್ರಗಳ ದೇಶೆಯಿಂದಲೂ ಧಾರ್ಮಿಕ, ಸಾಂಸ್ಕೃತಿಕ, ಸಾಹಿತಿಕ, ರಾಜಕೀಯ ಹಾಗೂ ಆರ್ಥಿಕ ದೃಷ್ಟಿಯಿಂದಲೂ ಒಂದು ಕಾಲಕ್ಕೆ ವೈಭವಪೇರಿತ ನಾಡಾಗಿತ್ತೆಂದು ಅದರ ಹಿರಿಮೆ ಗರಿಮೆಗಳಿಂದ ವ್ಯಕ್ತವಾಗುತ್ತದೆ. ಸುಭದ್ರವಾಗಿದ್ದ ಸಗರನಾಡು ಪರಕೀಯರ ದೃಷ್ಟಿ ದೋಷಕ್ಕೂ ಭೋಗಲಾಲಸೆಗೂ ದುರ್ವ್ಯಾಮೊಹಕ್ಕೂ ಸಿಲುಕಿ. ಭಗ್ನವಾಗಿ ಛಿದ್ರ ಛಿದ್ರವಾದದ್ದು ದೈವಿ ದುರ್ವಿಲಾಸ ಸಗರಕೋಟೆ ವಾಗಣಗಿರಿಯ ಕೋಟೆ ಇದಕ್ಕೆ ಸಾಕ್ಷಿಯಾಗಿದೆ.

ಈ ನಾಡಿಗೆ ಸಗರನಾಡು ಎಂದು ಹೆಸರು ಬಂದದ್ದು ಪುರಾಣ ಕಾಲದಿಂದಲೂ ಎಂದು ಹೇಳುವಲ್ಲಿ ಮಹಾಬಲಶಾಲಿಯು ಉನ್ನತಿ, ಮಹಿಮಾ ಸಂಪನ್ನನೂ ಪರಮಧಾರ್ಮಿಕನು, ಆದ ಸಗರನು ಈ ನಾಡನ್ನು ಆಳುತ್ತಿದ್ದರಿಂದ ಈ ನಾಡಿಗೆ ಸಗರ ನಾಡು ಎಂದು ಹೆಸರು ಬಂದಿದೆ.

ಸಗರನಾಡಿನ ಸುತ್ತಮುತ್ತಾ ಬೆಟ್ಟದ ಮೇಲೆ ಕಾಣುತ್ತಿರುವ ಕೋಟೆಗಳು ಈ ರಾಜನೇ ಕಟ್ಟಿಸಿದನೆಂಬ ಪ್ರತೀತಿ ಇದೆ. ಮೊಗಲ ಚಕ್ರವರ್ತಿ ಔರಂಗಜೇಬನ ಕ್ರೌರ್ಯಗಳಿಗೆ ತುತ್ತಾಗಿ ಶೀಥಿಲವಾದ ಅಲ್ಲಲ್ಲಿ ಹಾಳುಬಿದ್ದ ಕೋಟೆಗಳನ್ನು ವಿಜಾಪುರದ ಬಾದ್‌ಶಾಹ್‌ರು ಪುನರ್‌ನಿರ್ಮಿಸಿದ್ದಾರೆಂದು ತಿಳಿದುಬರುತ್ತದೆ. ಕೋಟೆಯಲ್ಲಿ ಕಾಣಬರುವ ಹಿಂದೂ ದೇವಸ್ಥಾನಗಳು ಇದಕ್ಕೆ ಸಾಕ್ಷಿಯಾಗಿವೆ.

ಮುಸಲ್ಮಾನರ ಅಧಿಪತ್ಯಕ್ಕೆ ಒಳಪಟ್ಟಾಗ ಅಲ್ಲೊಂದು ಮಸೀದಿ ನಿರ್ಮಾಣವಾದದ್ದು ಸಹಜವೆನಿಸಿದೆ. ಸಗರನಾಡು ಚಾಲುಕ್ಯರ ಮೊದಲುಗೊಂಡು ಗೋಸಲ ವಂಶದ ಸುರಪುರದ ದೊರೆಗಳವರೆಗೂ ಔರಂಗ್‌ಜೇಬನಿಂದ

ಮೊದಲುಗೊಂಡು ಹೈದಾರಾಬಾದಿನ ನಿಜಾಮನ ವರೆಗೂ ವಿವಿಧ ಅರಸರ ಆಡಳಿತಕ್ಕೆ ಒಳಪಟ್ಟು ಉನ್ನತಿಯನ್ನು ಅವನತಿಯನ್ನು ಪಡೆಯುತ್ತಲೇ ಬಂದಿತು. ವಿಜಯನಗರದ ಕಂಪಿಲರಾಯನ ಕಾಲಕ್ಕೆ ಫಲವತ್ತಾದ ಈ ಸಗರನಾಡು ಅತ್ಯುನ್ನತ ವೈಭವದಿಂದ ಮೆರೆದಿತ್ತೆಂದು ತಿಳಿದುಬರುತ್ತದೆ. ಮುಸ್ಲಿಂ ಬಾದಾಶಾಹ್‌ರೊಡನೆ ಕೃಷ್ಣದೇವರಾಯ ಸಗರ ಕೋಟೆಯಲ್ಲಿ ಯುದ್ಧ ಮಾಡಿದ ಸಂಗತಿಯನ್ನು ಇತಿಹಾಸಕಾರರಾದ ''ಶ್ರೀ ನೀಲಕಂಠ ಶಾಸ್ತ್ರೀಗಳು'' ಉಲ್ಲೇಖಿಸಿದ್ದಾರೆ. ಅಳಿಯ 'ರಾಮರಾಯರಿಗಂತು' 'ಸಗರ ಸಂಕ್ರಮಣರಾಯ' ನೆಂಬ ಹೆಸರು ಆತನ ಬಿರುದಾವಳಿಗಳಲ್ಲಿ ಒಂದಾಗಿತ್ತೆಂಬುದನ್ನು ಅನೇಕ ಕೈಫಿಯತ್ತುಗಳಲ್ಲಿ ಹೇಳಲಾಗಿದೆ.

ಒಟ್ಟಿನಲ್ಲಿ ಸಗರನಾಡು ಇತಿಹಾಸದುದ್ದಕ್ಕೂ ಬೆಳೆದುಬಂದ ಹೆಸರು. ವಾಸಿಯಾದ ನಾಡಾಗಿದೆ. ಕಾಲಕಾಲಕ್ಕೂ ಅದರ ಗಡಿಗಳು ವಿಸ್ತೃತವಾಗಿಯೂ ಮೋಟಕಾಗಿಯೂ ಕೊನೆಗೆ ಕೃಷ್ಣಾ ಭೀಮಾ ನದಿಗಳ ಮಧ್ಯದ ಮೂರು ತಾಲೂಕುಗಳಿಗೆ ಸುರಪುರ, ಶಹಾಪುರ, ಜೇವರ್ಗಿ, ಸೀಮಿತವಾದಂತೆಯೂ ಕಂಡುಬರುತ್ತದೆ. ಸಗರ ಸಾವಿರ ಹಳ್ಳಿ ಏಕದೊರನಹಳ್ಳಿ ಎಂಬ ಮಾತು ದೇವದುರ್ಗ, ಲಿಂಗಸೂಗೂರ, ಗುಡಗುಂಟಿ, ಸಂಸ್ಥಾನ ಯಾದಗೀರಿಯ ಕೆಲವು ಭಾಗಗಳು ಸುರಪುರ ಸಂಸ್ಥಾನ ಕಾಲದಲ್ಲಿ ಅದರ ವಶದಲ್ಲಿ ಇದ್ದವೆಂಬ ಮಾತು ನಿಜವಾದ್ದು. ಬೀದರ ಕೋಟೆಯವರೆಗೂ ಸಗರನಾಡು ವಿಸ್ತಾರಗೊಂಡಿತ್ತೆಂಬ ವಿಚಾರವು ಸಗರನಾಡಿನ ಹರವು ಮತ್ತು ವೈಶಾಲ್ಯವನ್ನು ಎತ್ತಿ ತೋರಿಸುತ್ತದೆ. ದಿವಂಗತ ಕಪಟರಾಳ ಕೃಷ್ಣರಾಯರು ಈ ಸಂಗತಿಯನ್ನು ತಮ್ಮ 'ಸುರಪುರ ಸಂಸ್ಥಾನದ ಇತಿಹಾಸ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

ಸಗರ ನಾಡಿನ ವಿವಿಧ ಸ್ಥಳಗಳಲ್ಲಿ ರಾಮಾಯಣ, ಮಹಾಭಾರತದ ಅನೇಕ ಕುರುಹುಗಳು ದೊರೆಯುತ್ತಿರುವುದು ಇದರ ಪ್ರಾಚೀನತೆಗೆ ಸಾಕ್ಷಿಯಾಗಿದೆ. ಪುರಾತತ್ವ ಇಲಾಖೆಯ ಸಂಶೋಧಕರಾಗಿದ್ದ ಟೇಲರ ಸಾಹೇಬರು (ಕ್ರಿ.ಶ. ೧೮೫೨ರಲ್ಲಿ) ಕೈಗೊಂಡ ಸಂಶೋಧನೆಯಿಂದ ಜೇವರ್ಗಿ ಆಂದೋಲಗಳಲ್ಲಿ ಮಣ್ಣಿನ ಪಾತ್ರೆಗಳು, ಕಂಚಿನ ವಿಗ್ರಹಗಳು ಹಾಗೂ ಬಿಳುಪುಗಲ್ಲಿನಲ್ಲಿ ಮಾಡಿದ ಅನೇಕ ವಸ್ತುಸಾಮಾಗ್ರಿಗಳು ಕ್ರಿ.ಶ. ಪೂರ್ವ ೨-೩ ಸಾವಿರ ವರ್ಷಗಳಿಗಿಂತ ಪೂರ್ವವೆಂದು ನಿರ್ದಿಷ್ಟ ಪಡಿಸಿದ್ದಾರೆ. ಪ್ರಾಚೀನ ಕಾಲದ ಇತಿಹಾಸದುದ್ದಕ್ಕೂ ಈ ಸಗರನಾಡು ಹೆಸರುವಾಸಿಯಾದ ನಾಡಾಗಿತ್ತೆಂಬುದು ನಿಜವಾದ ಸಂಗತಿಯಾಗಿದೆ.

ಸಗರನಾಡಿನ ಐತಿಹಾಸಿಕ ಹಿನ್ನೆಲೆಯನ್ನು ಕೆದಕಿ ನೋಡಿದಾಗ ರೋಮಾಂಚನವೆನಿಸುತ್ತದೆ. ಇನ್ನು ಸಗರ ಚಕ್ರವರ್ತಿಯ ಬಗೆಗೂ ಅಧ್ಯಯನ ಮಾಡಲಾಗಿದೆ. ಈ ಪ್ರಾಂತ್ಯದಲ್ಲಿ ನಾವು ಕಾಣುತ್ತಿರುವ ಊರುಗಳು ಮೂರು. ಒಂದು ಹಳೆಯ ಸಗರ, ಇನ್ನೊಂದು ಶಹಾಪುರ ಮೂರನೆಯದು ಹೊಸಸಗರ ಇವುಗಳಲ್ಲಿ ಪುರಾತನ ಸಗರ ಯಾವುದು? ಎಂಬ ಪ್ರಶ್ನೆ ತಲೆದೂರುತ್ತದೆ. ಕೆಲ ಪ್ರಾಚೀನ ಗ್ರಂಥಗಳಿಂದ ಸಗರಾದ್ರಿಯ ತಪ್ಪಲಲ್ಲಿ ವಿಸ್ತೃತವಾಗಿ ಬೆಳೆದಿದ್ದ ''ಸಗರ'' ನಗರವೇ ಪುರಾತನ ಸಗರವೆಂದು ಕಂಡುಬರುತ್ತದೆ. ಮಾಸಿನಾಳದ ನಾಗರಾಜ ತನ್ನ 'ಪುಣ್ಯಸ್ರವ'ವೆಂಬ ಗ್ರಂಥದಲ್ಲಿ ತಾನು ಸೇಡಿಂಬಪುರದಲ್ಲಿ ರಾಷ್ಟ್ರಕೂಟ ರಾಜರ ಆಶ್ರಯದಲ್ಲಿದ್ದಾಗ ಸಗರನಗರದ ಶ್ರೇಷ್ಠಿಗಳು ತನಗೆ ಕಾವ್ಯವೊಂದನ್ನು ಬರೆಯಲು ಕೇಳಿಕೊಂಡರೆಂದೂ

ಅವರ ಇಚ್ಛೆಯಂತೆ ತಾನು 'ಪುಣ್ಯಸ್ರವ'ವೆಂಬ ಕಾವ್ಯವನ್ನು ರಚಿಸಿದನೆಂದೂ ಹೇಳಿಕೊಂಡಿದ್ದಾನೆ. ಅಂದ ಮೇಲೆ ಈಗಿನ ಶಹಾಪುರ ಮತ್ತು ಹಳೆಸಗರ ಇವೇ ಪುರಾತನ ಸಗರವಾಗಿರಲು ಯಾವ ಅನುಮಾನವೂ ಪಡಬೇಕಾಗಿಲ್ಲ. ಮೊಗಲ್ ಚಕ್ರವರ್ತಿಯ ದಾಳಿಯಲ್ಲಿ ಹಾಳಾಗಿದ್ದ ಸಗರ ಅದಿಲ್‌ಶಾಹಿ ಅರಸರ ಕಾಲಕ್ಕೆ ಶಹಾಪುರ (ಷಹಾಪುರ) ವಾಯಿತೆಂಬುದು ಈ ಮಾತನ್ನು, ಪುಷ್ಟೀಕರಿಸುತ್ತದೆ. ಇನ್ನೂ ಪುರಾತನ ನಗರದ ಅಳಿದುಳಿದ ಭಾಗ ಹಳೆಯ ಸಗರವಾಗಿ ಪುರಾತನ ಸಗರದಿಂದ ನಿರ್ಗತಿಕರಾಗಿ ಹೋದ ಜನರು ಬೆಟ್ಟದ ಹಿಂಭಾಗದಲ್ಲಿ ಹೊಸ ಸಗರವೊಂದನ್ನು ನಿರ್ಮಿಸಿಕೊಂಡಿರಬಹುದೆಂದು ತಿಳಿದುಬರುತ್ತದೆ. ಸಗರ ಚಕ್ರವರ್ತಿಯ ಕಾಲದಲ್ಲಿ ನೆಲೆಸಿದ್ದ ಸಗರ ಈಗಿನ ಶಹಾಪುರವೇ ಆಗಿತ್ತು ಎಂಬುದು ನಿರ್ವಿವಾದ.

ಇನ್ನು ಸಗರ ಚಕ್ರವರ್ತಿಯ ಜನನ ಈತನ ವೃತ್ತಾಂತ ಎಷ್ಟು ರೋಚಕವೊ ಅನುಕಂಪಪೂರ್ಣವೋ ಅಷ್ಟೇ ವೈಭವಪೇತವು ಆಗಿದೆ. ಇದು ಈ ನಾಡಿನ ಪಾವಿತ್ರ್ಯಕ್ಕೂ ಹಿರಿಮೆಗೂ ಕನ್ನಡಿ ಹಿಡಿಯುತ್ತದೆ. ಇಕ್ಷಾಕು ವಂಶದಲ್ಲಿ ಅಂಬರೀಷನೆಂಬ ಅರಸು ಪರಮಜ್ಞಾನಿಯು ರಾಜಶ್ರೀಯು, ಎಂದು ಪ್ರಸಿದ್ಧಿ ಹೊಂದಿದ್ದನು. ಆತ ಮನುಪುತ್ರನಭಗನ ಮಗನಾದ ನಾಭಗನ ಮಗನು, ಈತನು ಪರಮಾತ್ಮನ ಪರಮ ಪ್ರೀತಿಯ ಭಕ್ತನು ಉದಾರ ಧರ್ಮಾತ್ಮನು ಆಗಿದ್ದನು. ಇದೇ ವಂಶದಲ್ಲಿ ಜನಿಸಿದ ತ್ರಿಶಂಕು (ಸಾತ್ಯವೃತ)ವಿಗೆ ಹರಿಶ್ಚಂದ್ರನೆಂಬ ಪ್ರಖ್ಯಾತ ಮಗ ಹುಟ್ಟಿದ. ವಿಶ್ವಾಮಿತ್ರನ ದೆಸೆಯಿಂದಾಗಿ ಆತ ಪಟ್ಟ ಭವಣೆ ಈಶ್ವರನ ಸಾಕ್ಷಾತ್ಕಾರ ಮುಂತಾದ ವಿಷಯಗಳು ಗೊತ್ತಿದ್ದ ಸಂಗತಿಗಳೇ ಆಗಿವೆ. ಹರಿಶ್ಚಂದ್ರ ಮಹಾರಾಜನಿಗೆ ಬಹುಕಾಲ ಮಕ್ಕಳು ಆಗದಿದ್ದಾಗ ನಾರದರ ಉಪದೇಶದಿಂದ ವರುಣ ದೇವರ ಅನುಗ್ರಹದೊಂದಿಗೆ ರೋಹಿತನೆಂಬ ಮಗನನ್ನು ಪಡೆದನು ರೋಹಿತನ ಮಗನೇ ಹರಿತ. ಹರಿತನಿಂದ ಚಂಪ, ಚಂಪನಿಂದ ಸುದೇವ, ಸುದೇವನಿಗೆ ವಿಜಯ, ವಿಜಯನ ಮಗ ಬರುಕ, ಬರುಕನಿಗೆ ವೃಕ, ವೃಕನಿಗೆ ಭಾವುಕ, ಭಾಹುಕನಿಂದ ಶತ್ರುಗಳು ರಾಜ್ಯವನ್ನು ಕಸಿದುಕೊಂಡಿದ್ದರಿಂದ ಆತ ನಿರಾಶೆ ಹೊಂದಿ. ತನ್ನ ಒರ್ವ ಪ್ರೀತಿಯ ಮಡದಿಯೊಡನೆ ವನವನ್ನು ಸೇರಿದನು. ವೃದ್ಧಾಪ್ಯದಿಂದಾಗಿ ಆತನಿಗೆ ಮೃತ್ಯು ಸಂಭವಿಸಿತು. ಆತನ ಪತ್ನಿ ಸಹಗಮನಕ್ಕಾಗಿ ಸಿದ್ಧಳಾದಳು ಆದರೆ ಮಹರ್ಷಿ ಜಾರ್ವರಿಗೆ ಆಕೆ ಗರ್ಭವತಿ ಎಂಬುವುದು ತಿಳಿದು ಬಂದದ್ದರಿಂದ ಆಕೆ ಸತಿಯಾಗದಂತೆ ತಡೆದರು. ಈ ವಿಷಯ ಆಕೆಯ ಸವತಿಗೆ ಗೊತ್ತಾಯಿತು. ಅವರು ಉಪಾಯದಿಂದ ಆಕೆಯ ಊಟದಲ್ಲಿ ವಿಷ ಬೆರಸಿದರು ಆದರೆ ಆಕೆಯ ಗರ್ಭದ ಮೇಲೆ ವಿಷದ ಯಾವ ಪರಿಣಾಮವು ಆಗಲಿಲ್ಲ. ಅದರ ಬದಲಾಗಿ ವಿಷದೊಡನೆಯೇ ಸಗರನ ಜನ್ಮವಾಯಿತು. ಆತನೇ ಮುಂದೇ ಯಶಸ್ವಿ ಸಾಮ್ರಾಟನಾಗಿ ಸಗರ ಚಕ್ರವರ್ತಿ ಎನಿಸಿಕೊಂಡ. ಸಗರ ಚಕ್ರವರ್ತಿಯ ಕಾಲದಿಂದಲೆ ಇದಕ್ಕೆ ಸಗರವೆಂಬ ಹೆಸರು ಬಂದಿರಬಹುದೆಂಬುದು ನಿರ್ವಿವಾದ.

**ಇತಿಹಾಸ ದೃಷ್ಟಿಯಿಂದ ಈ ಭಾಗದಲ್ಲಿ ಆಳಿದ ರಾಜಮನೆತನಗಳು ಇಂತಿವೆ.**

೧. ಸಾತವಾಹನರು

೨. ಬಾದಾಮಿಯ ಚಾಳುಕ್ಯರು

೩. ರಾಷ್ಟ್ರಕೂಟರು

೪. ಕಲ್ಯಾಣದ ಚಾಳುಕ್ಯರು

೫. ಹೈಂಕಯರು

೬. ಕಳಚೂರ್ಯರು

೭. ಶಿಲಹಾರರು

೮. ಮಾಸವಾಡಿಯ ಸೆವಣರು

೯. ಮಗರ ವಂಶದವರು

೧೦. ಬಹುಮನಿ ಅರಸರು

೧೧. ವಿಜಾಪುರದ ಆದಿಲ್‌ಶಾಹೀ ಮನೆತನ

೧೨. ಸುರಪುರದ ಗೋಸಲ ವಂಶದ ನಾಯಕರು.

ಆಳಿವೆಯಲ್ಲದೆ ಕಂಪನಿ ಸರಕಾರ ಹಾಗೂ ನಿಜಾಮ ಸರಕಾರಗಳೂ ಇಲ್ಲಿ ತಮ್ಮ ಪ್ರಭುತ್ವದ ಪ್ರಾಬಲ್ಯವನ್ನು ಮೆರೆದಿವೆ.

ಈ ನಾಡಿನ ಶಿರವಾಳ ಊರು ಕೆಂಬಾವಿ, ಒಡಗೇರಿ ಮುದನೂರು ಮತ್ತು ದುಮ್ಮದ್ರಿ ಮುಂತಾದವುಗಳು ಆ ಕಾಲದ ಅಗ್ರಹಾರಗಳು ಹಾಗೂ ಘಟಿಕಾಸ್ಥಾನಗಳಾಗಿದ್ದವು.

ಎಮ್ಮಡಗಿ, ಹಗರಟಗಿ, ರಾಜನಕೋಳೂರು, ಹುಣಸಗಿ, ಕುಳಗೇರಿ, ಮಂದಾಗ್ನಿ, ಅಗ್ನಿ, ಆಂದೇಲಿ, ಶಿರವಾಳ ನ್ಯಾಳ, ಮುಂತಾದವುಗಳು ಅತ್ಯಂತ ಪ್ರಾಚೀನವಾದ ಸ್ಥಳಗಳಾಗಿ ಅನೇಕ ಅವಶೇಷಗಳನ್ನು ಹೊಂದಿರುವವಲ್ಲದೆ ಸುರುಪುರ, ದೇವಪುರ, ಮುದ್ದನೂರ, ಕೆಂಭಾವಿ, ನಾರಾಯಣಪುರ, ಯಾಳಗಿ, ಕಕ್ಕೇರಿ, ಜೇವರ್ಗಿ, ಆಂದೋಲಾ ಮುಂತಾದವುಗಳು ಮಹಾಶಿವಶರಣರನ್ನು ಮಹಾವೀರಾಧಿ ವೀರರನ್ನೂ ಮಹಾಕವಿಗಳನ್ನೂ ಹಾಗೂ ಭಗವಾನ್ ಸೂರ್ಯಪತ್ನಿಯಾದ ಛಾಯಾಭಗವತಿಯೆ ಭವ್ಯ ಮಂದಿರವನ್ನು ಹೊಂದಿದ ಪುಣ್ಯಸ್ಥಳಗಳಾಗಿವೆಯಲ್ಲದೆ ಇನ್ನು ಅನೇಕಾನೇಕ ಕ್ಷೇತ್ರಗಳು ಈ ನಾಡಿನಲ್ಲಿವೆ.

ಕಕ್ಕೇರಿಯಲ್ಲಿ ಡೋಹರ ಕಕ್ಕಯ್ಯನ ಗುಡಿಯಿದೆ. ಕಕ್ಕಯ್ಯನು ಇಲ್ಲಿಯೆ ದೇಹವಿಟ್ಟಂತೆ ತಿಳಿದುಬರುತ್ತದೆ. ಇಲ್ಲಿ ಕಕ್ಕಯ್ಯನ ದೇವಸ್ಥಾನವು ಚಾಳುಕ್ಯರ ಕಾಲದ್ದಾಗಿದೆ. ಈ ಗ್ರಾಮದಲ್ಲಿ ಆರಾಧ್ಯ ದೈವವಾದ ಸೋಮನಾಥ ಮಂದಿರವು ಬಹು ಸುಂದರವಾಗಿದೆ.

'ಸಗರ', 'ಏವೂರು' 'ಕೆಂಭಾವಿಗಳು ಮಾಹಿಷ್ಮತೀಪುರವರಾಧೀಶ್ವರ' 'ಹೈಹಯರುಲೋಪ್ಪಮೆ' ಇತ್ಯಾದಿ ಬಿರುದಾಂಕಿತ ಸಗರ ವಂಶಕ್ಕೆ ರಾಜಧಾನಿಯಾಗಿದ್ದರೆ 'ಹಗರಟಗೆ' 'ಮಾಸವಾಡಿ ಸೇವುಣರು' ರಾಜಧಾನಿಯಾಗಿತ್ತು. ಈ ಮನೆತನ ಯಾದವ ಚಕ್ರವರ್ತಿಗಳೆಂದು ಪ್ರಸಿದ್ಧರಾದ ದೇವಗಿರಿಯೆ ಯಾದವ ಸೇವುಣ ಮನೆತನಕ್ಕೆ ಸಂಬಂಧ ಹೊಂದಿತ್ತು.

ಇಂದಿನ ಕುಳಗೇರಿಯೇ ಹಿಂದಿನ ಕುಂತಳ. ಈ ಕುಂತಳದ ಬಗ್ಗೆ ದೇವಪುರದ ಲಕ್ಷ್ಮೀಶ ಕವಿಯ ಜೈಮಿನಿಭಾರತದ ಚಂದ್ರಹಾಸಾಖ್ಯಾನದಲ್ಲಿ ವರ್ಣನೆ ಬಂದಿದೆ.

ವಚನ ಸಾಹಿತ್ಯ ದಿವ್ಯಗಂಗೋತ್ರಿಯಾದ ಸುರಪುರ ತಾಲ್ಲೂಕಿಗೆ ಮುದನೂರಿನಿಂದಲೇ ವಚನವಾಹಿನಿಯು ಪ್ರವಹಿಸಲು ಪ್ರಾರಂಭಿಸಿದ್ದುದನ್ನು ನೆನೆದರೆ ಮೈಮನವೆಲ್ಲ ಪುಳಕಿತವಾಗುತ್ತದೆ. ಕ್ರಿ.ಶ. ೧೧೦೦ರಲ್ಲಿ ಬಾಳಿದ ಕರ್ನಾಟಕ ವಿಚೂತನವನ ಚೈತ್ರನೆಂಬ ಬಿರುದಾಂಕಿತನಾದ ಮಹಾಕವಿ ಲಕ್ಷ್ಮೀಶನು ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ದೇವಪುರ ದವನೇ ಎಂಬುದನ್ನು ಸ್ಮರಿಸಿದರೆ ಸಂತೋಷದಿಂದ ಮೈನವಿರೇಳುತ್ತದೆ.

ಸುರಪುರ ತಾಲೂಕಿನ ಏವೂರು, ದೇವಪುರಕ್ಕೆ ೧೭ ಮೈಲುಗಳು ಅಂತರದಲ್ಲಿದೆ. ಆತನಿದ್ದ ವಿದ್ವತ್ ಸಭಾವಲಯವು ಈ ಏವೂರಿನಲ್ಲಿಯೇ ಇದ್ದಿತೆಂದು ಹೇಳಿದರೆ ಆಶ್ಚರ್ಯಪಡಬೇಕಾಗಿಲ್ಲ. ಸುರಪುರ ತಾಲೂಕಿನ ಈ ಏವೂರಿನ ಅಥವಾ ದರ್ಶನಾಪುರದ ಸಮೀಪದಲ್ಲಿರುವ ಮತ್ತು ಏವೂರಿನ ಶಾಸನದಲ್ಲಿ ನಿರೂಪಿತವಾಗಿರುವ ಅಣ್ಣಮಗೆರೆಯು ಇಂದು 'ಹಾರುವಣ್ಣನ ಕೆರೆ' ಹಾರಣಗೆರಿ ಅಥವಾ 'ಹಾರಣಗೇರಾ' ಎಂದೂ ಕ್ರಮೇಣ 'ಅಣ್ಣಿಗೇರ' ಎಂದೂ ಮಾರ್ಪಾಟಾಗಿರುವುದನ್ನು ಗಮನಿಸಬಹುದು.

ಈ ಸಗರನಾಡಿನಲ್ಲಿ ಜಲದುರ್ಗ, ವನದುರ್ಗ, ಶಹಾಪೂರ, ಆಲೂರ ಹಾಗೂ ರಾಯನಪಾಳ್ಯದಲ್ಲಿ ಕೋಟೆ ಕೊತ್ತಳಗಳಿವೆಯಲ್ಲದೆ ಅನೇಕ ಹಳ್ಳಿಗಳಲ್ಲಿ ವಾಡೆಗಳೂ ಇವೆ. ಕಾಮನಟ್ಟಿ ಬಳಿಯ ಬನ್ನಟ್ಟಿಯಲ್ಲಿ ವಿಜಯನಗರದ ಅಂತಿಮ ಅರಸನಾದ ರಾಮರಾಯನ ಶಿರಚ್ಛೇದನವಾದ ಸಂಗತಿಯು ಇತಿಹಾಸದ ಪುಸ್ತಕಗಳಲ್ಲಿ ಇತ್ತಿಚೆಗೆ ಬೆಳಕಿಗೆ ಬಂದಿದೆ. ಡಾ. ಪಿ.ಎಂ.ಜೋಷಿ ಅವರ The History of Meduanuval Deccan ಎಂಬ ಗ್ರಂಥದಲ್ಲಿ ಈ ವಿಷಯವು ಅಡಕವಾಗಿದೆ.

ಈ ಸಾಗರನಾಡನ್ನು ಅನೇಕ ಶಿವಶರಣರು, ಹರಿದಾಸರು, ಕವಿಗಳು, ಕಲಿಗಳು ತಮ್ಮ ಅಡಿಯ ಹುಡಿಯಿಂದ ಇಲ್ಲಿನ ಹಿರಿಮೆ ಮತ್ತು ಪಾವಿತ್ರ್ಯವೂ ಹೆಚ್ಚುವಂತೆ ಮಾಡಿ ಅಜರಾಮರರಾಗಿದ್ದಾರೆ, ಇಲ್ಲಿಯ ಶರಣರಲ್ಲಿ ಪ್ರಮುಖರಾದ ಜೇಡರ ದಾಸಿಮಯ್ಯ, ಕೊಂಡಗುಳಿಯ ಕೇಶಿರಾಜ, ಸಗರದ ಬ್ರಹ್ಮಯ್ಯ, ಕೆಂಭಾವಿಯ ಭೋಗಣ್ಣ, ತಿಂಥಣಿಯ ಮೌನೇಶ್ವರರು, ಜೇವರ್ಗಿಯ ಷಣ್ಮುಕ ಶಿವಯೋಗಿಗಳು, ಕಡಕೋಳದ ಮಡಿವಾಳಪ್ಪನವರು ಮುಖ್ಯ ಶಿವಶರಣರಾಗಿದ್ದರಲ್ಲದೆ ಖೈನೂರಿನ ಕೃಷ್ಣಪಯ್ಯ, ಶಹಾಪುರದ ಚರಬಸವೇಶ್ವರರು ಸುರಪುರದ ನಿಷ್ಠೆಯ ಕಢ್ಲಪ್ಪ ವೀರಪ್ಪನವರು ಮತ್ತೆ ಅದೇ ಮನೆತನದವರಾದ ಶ್ರೀ ಕಿರಿಬೇಶ್ವರರು ಇವರೆಲ್ಲಾ ಅಲೌಕಿಕ ವ್ಯಕ್ತಿಗಳಾಗಿದ್ದರು. ಹೀಗೆ ನೂರಾರು ಶರಣರನ್ನು ಹೊಂದಿದ್ದ ಈ ನಾಡು ಪುನೀತವಾದುದಲ್ಲದೆ ಕಕ್ಕೇರಿಯ ಕಕ್ಕಯ್ಯ ಹಾಗೂ ಶ್ರೀ ಸೋಮನಾಥರು ಅಗ್ಗವಣಿ ಹೊನ್ನಯ್ಯ ಹಾವಿನಾಳ ಕಲ್ಲಪ್ಪ ಹೆಬ್ಬಾಳದ ಪರಮಾನಂದರು ಯಾಳಗಿಯ ರಾಮಪ್ಪಯ್ಯ ನಗನೂರು ಮತ್ತು ಗೌಡಗೇರಿಯ ನಡುವಿನ ಬೆಟ್ಟದ ಮೇಲಿರುವ ಗುಡ್ಡದ ಗುರುಲಿಂಗೇಶ್ವರ ಸುರಪುರದ ರಾಮಾನಂದರು ಗೋಗಿಯ ಚಂದಾಸಾಹೇಬರು,

ಸಗರದ ಸೋಫಿಸರು ಮತ್ತು ಸಾಹೇಬ ಮಳ್ಳಿಯ ತುಳಜಪಯ್ಯ ಇವರೆಲ್ಲರೂ ಈ ನೆಲದ ದಿವ್ಯ ಚೇತನಗಳಾಗಿ ಬೆಳೆದಿದ್ದಾರೆ.

ಸಗರದ ನಾಚಯ್ಯ ನೆಲ್ಲಿಗೆಯ ಶಾಂತಯ್ಯ ಹಾಗೂ ಓಲೆಯ ಶಾಂತಯ್ಯನವರಿಂದ ಪಾವನವಾದ ಈ ನೆಲದಲ್ಲಿಯೇ ಕಾಲಗಿಯ ಜಾನಪ್ಪ ಅರಳಗುಡಿಗೆಯ ಶರಣಬಸವೇಶ್ವರರು ಈ ಸಗರನಾಡಿನಲ್ಲಿ ಅವತರಿಸಿ ಅಂದಿನ ತಾರತಮ್ಯಗಳನ್ನೆಲ್ಲಾ ತೆಗೆದುಹಾಕಿ ಲೋಕವನ್ನೆ ಬೆಳಗಿದ ದಿವ್ಯ ವಿಭೂತಿ ಪುರುಷರಾಗಿದ್ದಾರೆ. ದೋರನಹಳ್ಳಿ ಇಟಗಿ ಗಂವ್ಹಾರ ಅಂದೋಲಾ ಮತ್ತು ಇನ್ನಿತರ ಸ್ಥಳಗಳಲ್ಲಿಯೂ ಅನೇಕ ಶರಣರು ಜನಿಸಿ ತಮ್ಮ ಪರಿಸರವನ್ನೆಲ್ಲಾ ಪಾವನವನ್ನಾಗಿ ಮಾಡಿದ್ದಾರೆ. ಈ ನಾಡಿನ ಗಡಿಯಲ್ಲಿರುವ ತಾಳಿಕೋಟೆಯ ಶಿವದೇವಯ್ಯ ಗೋಲಗೆರಿಯ ಗೊಲ್ಲಾಳ ಅಮರೇಶ್ವರ. ಆಯ್ದಕ್ಕಿ ಮಾರಯ್ಯ ಮತ್ತು ಆತನ ಪತ್ನಿ ಲಕ್ಕಮ್ಮ ನಾಲವಾಡದ ಶರಣವೀರೇಶ್ವರರು ಮತ್ತು ರುದ್ರಾಂಬೆಯವರಲ್ಲದೇ ಇನ್ನು ಅನೇಕರನ್ನಿಲ್ಲಿ ಹೆಸರಿಸಬಹುದು. ಶರಣರ ಭಂಡಾರವೇ ಈ ಸಗರನಾಡು. ಲಕ್ಕಪ್ಪ ಅ.ಶಿರಹಟ್ಟಿ ಅವರ ಬಸವರಾಜ ದೇವರ್ ಎಂಬ ಕೃತಿಯಲ್ಲಿ ಮತ್ತು ಬಿ. ಪುಟ್ಟಪ್ಪಮಯ್ಯ ಅವರ ಐತಿಹಾಸಿಕ ಶಿವಸರಣ ಹರಳಯ್ಯನು ಕಲಬುರ್ಗಿ ಜಿಲ್ಲೆಯ ಸುರಪುರದವನೆಂದು ಹೇಳುತ್ತಾರೆ. ಹೀಗೆ ಭಾರತದ ಅನೇಕ ಮತಪಂಥಗಳಿಗೆ ಈ ಸಗರನಾಡು ತನ್ನ ಉದಾರಾಶ್ರಮವೆನಿಸಿದೆ.

ಇನ್ನು ಸಗರನಾಡಿನ ಕೇಂದ್ರಸ್ಥಳವಾದ ಸುರಪರುದ ಐತಿಹಾಸಿಕತೆಯ ಹಿರಿಮೆ-ಗರಿಮೆಯನ್ನು ನೆನೆದಾಗ ಸುಪ್ತ ಚೇತನವು ಸೆಟೆದುನಿಲ್ಲುತ್ತದೆ. ಅತ್ಯಂತ ಗಂಡುಮೆಟ್ಟಿದ ಸ್ಥಳ ಈ ಸುರಪುರ ಸುರಪುರದ ಗೋಸಲವಂಶದ ಐತಿಹಾಸಿಕ ಪರಂಪರೆಯಲ್ಲಿ ಮೆರೆದು ಹೋದ ಇಲ್ಲಿನ ನಾಡನಾಯಕರಾಗಿದ್ದ ಬೇಡ ದೊರೆಗಳನ್ನು ಈ ನೆಲವು ಎಂದಿಗೂ ಮರೆಯದು

ಭಾರತದಲ್ಲಿ ಹಿಂದೂ ಸಂಸ್ಕೃತಿಯು ಉಸಿರಾಡುಲು ಛತ್ರಪತಿ ಶಿವಾಜಿ ಮಹಾರಾಜನು ಹೇಗೆ ಪ್ರಮುಖಪಾತ್ರವಹಿಸಿದ್ದನೋ, ಅದರಂತೆಯೇ ಅಥವಾ ಅದಕ್ಕಿಂತಲೂ ಒಂದು ಕೈ ಮೇಲಾಗಿ ಇಲ್ಲಿನ ಬೇಡನಾಯಕರು ಹಿಂದೂ ಸಂಸ್ಕೃತಿಯ ರಕ್ಷಕರಾಗಿಯೂ ಸರ್ವಧರ್ಮ ಸಹಿಷ್ಣುಗಳಾಗಿಯೂ ಈ ಸಗರನಾಡನ್ನು ಉಳಿಸಿಕೊಂಡು ಬಂದಿದ್ದಾರೆ.

ವಿಜಯನಗರ ಸಾಮ್ರಾಜ್ಯದ ಪತನನಂತರ ಅಲ್ಲಿನ ವೀರಸರದಾರರೆಲ್ಲರೂ ಚದುರಿಹೋದರು. ಹೀಗೆ ಚದುರಿ ಬಂದ ಜಕ್ಕಪ್ಪ ದೇಸಾಯಿಯಿಂದ ಅಂದರೆ, ಆತನ ಪುತ್ರರಾದ ಗಡ್ಡಿಪಿಡ್ಡನಾಯಕನಿಂದ ಸುರಪುರ ಸಂಸ್ಥಾನವೂ (ಕ್ರಿ.ಶ. ೧೬೫೬-೧೬೭೪) ಗಡ್ಡಿಲಿಂಗನಾಯಕನಿಂದ ಗುಡಗಂಟಿ ಸಂಸ್ಥಾನವು ಸ್ಥಾಪನೆಯಾದವು. ಮೊದಮೊದಲು ಇವರು ಸಗರನಾಡಿನ ಕೃಷ್ಣಾತೀರದ ನೀಲಕಂಠರಾಯನ ಗಡ್ಡಿ, ಕಕ್ಕೆರಿಗಳಲಿದ್ದು ನಂತರ ವಾಗಣಗೇರಿಯಲ್ಲಿ, ನೆಲೆಯೂರಿರುತ್ತಾರೆ. ಜಕ್ಕಪ್ಪ ದೇಸಾಯಿಯ ಪೂರ್ವಜರು ವಿಜಯನಗರದಲ್ಲಿ ದೊಡ್ಡ ಹುದ್ದೆಯಲ್ಲಿದ್ದವರು.

ಗೋಸಲವಂಶದ ಗಡ್ಡಿಪಿಡ್ಡನಾಯಕನು ವಿಜಾಪುರದ ಆದಿಲ್‌ಶಾಹಿ ಅರಸರಲ್ಲಿದ್ದ ಮದ್ದಾನೆಯೊಂದಿಗೆ ಹೋರಾಡಿ ಆ ಬಾದಷಹನಿಂದ ''ಮದಗಜಗಂಡ ಬಹರಿ ಪಿಡ್ಡನಾಯಕ'' ಎಂಬ ಬಿರುದಿನೊಂದಿಗೆ ಅನೇಕ ರಾಜಮರ್ಯಾದೆ ಹಾಗೂ ಸಗರನಾಡಿನ ಅಧಿಪತ್ಯವನ್ನು ವಹಿಸಿಕೊಳ್ಳುತ್ತಾನೆ. ವಿಜಾಪುರದ ಬಾದಷಹನು ಪಿಡ್ಡನಾಯಕನ ಮೈತ್ರಿಯನ್ನರಸಿದುದರಲ್ಲಿ ಬಹುಜಾಣ್ಮೆಯನ್ನು ತೋರಿದ್ದಾನೆ. ಅಂದಿನ ಮಹಾಬಲಿಷ್ಟರಾಗಿದ್ದ ಮೊಗಲರು ಹಾಗೂ ಬೀದರನ ಆದಿಲ್‌ಶಾಹಿಗಳು ಹಾಗೂ ಗುಲ್ಬರ್ಗಾದ ಬಹುಮನಿ ರಾಜ್ಯಗಳ ನಡುವೆ ಅತ್ಯಂತ ಬಲಿಷ್ಠವಾಗಿದ್ದ ಗಡ್ಡಿ ಪಿಡ್ಡನಾಯಕನನ್ನು ಸಗರನಾಡಿನಲ್ಲಿ ಮಿತ್ರನನ್ನಾಗಿ ನೆಲೆಗೊಳ್ಳುವಂತೆ ಮಾಡುತ್ತಾನೆ.

ಗಡ್ಡಿ ಪಿಡ್ಡನಾಯಕನ ಪರಾಕ್ರಮಕ್ಕೆ ಮೆಚ್ಚಿದ ಮೊಗಲ್ ಚಕ್ರವರ್ತಿಯಾದ ಔರಂಗಜೇಬನು ನೀನು ಮುಸಲ್ಮಾನನಾಗಿದ್ದರೆ ನಮ್ಮ ಧರ್ಮಬಂಧುವಾಗಿರುತ್ತಿದ್ದಿಯಲ್ಲದೆ ಭಾರತದ ಯಾವ ಅರಸರ ಆತಂಕಕ್ಕೂ ಒಳಗಾಗದೆ ಸುರಕ್ಷಿತವಾಗಿರುತ್ತಿದ್ದಿ, ನಮ್ಮ ಆಶ್ರಯದಲ್ಲಿರುವ ನೀನು ಯಾವ ಸಂಕಟದ ಛಾಯೆಗೂ ಒಳಗಾಗದೆ ರಕ್ಷಿಸಲ್ಪಡುತ್ತಿದ್ದಿ ಆದರೆ ನೀನು ಮುಸಲ್ಮಾನನಾಗಿಲ್ಲವಲ್ಲ ಎಂದು ಬಲವಾದ ಖೇದವಾಗಿದೆ. ಎಂದು ಅತ್ಯಂತ ಗೌರವಾನ್ವಿತವಾಗಿ ಬರೆದುಕೊಟ್ಟ ಹಾಗೂ ಸದ್ಯ ಸುರಪುರದ ಅರಮನೆಯಲ್ಲಿ ಸುರಕ್ಷಿತವಾಗಿರುವ ಈ ದೊಡ್ಡಗಾತ್ರದ ಪತ್ರದಲ್ಲಿ ಔರಂಗಜೇಬನ ಹಸ್ತಕ್ಷರ ಮತ್ತು ರಾಜಮುದ್ರೆಯಲ್ಲದೆ ಚಂದನದಲ್ಲಿ ಅದ್ದಿದ ಬಲಗೈಯನ್ನು ಮೂಡಿಸಿದ ಇಂತಹ ಪತ್ರವು ಸುರಪುರವನ್ನು ಬಿಟ್ಟು, ಪ್ರಪಂಚದಲ್ಲಿ ಬೇರೆಲ್ಲಿಯೂ ದೊರೆಯಲಾರದು. ಇಂತಹ ವೀರತನದ ಧೀರಹೆಗ್ಗಳಿಕೆ ಈ ಸಗರನಾಡಿನದು.

ಗಡ್ಡಿ ಪಿಡ್ಡನಾಯಕರ ತರುವಾಯ ಹಸರಂಗಿ ಪಾಮನಾಯಕರು ಪಿತಾಂಬರ ಬಹರಿ ಪಿಡ್ಡನಾಯಕರಲ್ಲಿ ಇಮ್ಮಡಿ ಪಾಮನಾಯಕರು ಮುಮ್ಮಡಿ ಪಿಡ್ಡನಾಯಕರು, ಮಹಾವೀರ (ಕ್ರಿ.ಶ. ೧೭೪೬-೧೭೫೨) ಮೊಂಡಗೈ ವೆಂಕಟಪ್ಪನಾಯಕರು, ಮುಮ್ಮಡಿ ಪಾಮನಾಯಕರು ಅಲ್ಲದೆ ಇನ್ನು ಅನೇಕ ವೀರಾಧಿವೀರ ಗೋಸಲವಂಶದ ನಾಯಕರು ಈ ನಾಡನ್ನು ಆಳಿ ಹೋಗಿದ್ದಾರೆ.

ಮೊಂಡಗೈ ವೆಂಕಟಪ್ಪನಾಯಕರ ಕಾಲದ ''ಪಾಂಡಿಚೇರಿಯ ಕಾಳಗ''ವು ಜಗತ್ಪ್ರಸಿದ್ಧವಾದುದು. ಮೊಗಲರಿಗೂ ಬ್ರಿಟಿಷರಿಗೂ ಹಾಗೂ ನಿಜಾಮನಿಗೂ ಹಣಿಯಾದ ಫ್ರೆಂಚರ ಆ ಅಭೇದ್ಯವಾದ ಪಾಂಡಿಚೇರಿಯ ಕೋಟೆಯನ್ನು ಮೊಂಡಗೈ ವೆಂಕಟಪ್ಪನಾಯಕನು ಏಕಾಂಗಿ ವೀರನಾಗಿ ತನ್ನ ಅಲ್ಪ ಸೈನ್ಯದೊಂದಿಗೆ ಹೋರಾಡಿ ಕೇವಲ ಮೂರೇ ಮೂರು ತಾಸುಗಳಲ್ಲಿ ಆ ದುರ್ಗಮ ಕೋಟೆಯನ್ನು ವಶಪಡಿಸಿಕೊಂಡು ಕರಾರಿನಂತೆ ಅದನ್ನು ನಾಸರಜಂಗನಿಗೆ ಒಪ್ಪಿಸಿ ಆತನಿಂದ ''ಬಲವಂತ ಬಹರಿ ರಾಬಜಂಗ ಮುತಹರುದ್ದೌಲಾ ಬಬರಾಲ್ಮುಲ್ಕೈ'' ಎಂದು ಹೊಗಳಿಸಿಕೊಳ್ಳುತ್ತಾನೆ.

ನಂತರ ಸಗರನಾಡನ್ನಾಳಿದ ಗೋಸಲವಂಶದ ದೊರೆಗಳಲ್ಲಿ ಮುಮ್ಮಡಿ ಪಾಪನಾಯಕರು ಮುಮ್ಮಡಿ ವೆಂಕಟಪ್ಪನಾಯಕರು, ರಾಜಾಕೃಷ್ಣಪ್ಪನಾಯಕರು ಹಾಗೂ ನಾಲ್ವಡಿ ರಾಜಾ ವೆಂಕಟಪ್ಪನಾಯಕರು

ಮುಖ್ಯರಾದವರು. ಕ್ರಿ.ಶ. ೧೬೭೯ರಲ್ಲಿ ದೀಲೇರಖಾನನು ವಿಜಾಪುರದ ಮೇಲೆ ದಾಳಿಮಾಡಿ ನಿರಾಶನಾಗಿ ಮುದಗಲ್ಲು ರಾಯನಪಾಳ್ಯ, ತಾಳಿಕೋಟೆಯ ಮಾರ್ಗವಾಗಿ ಶಹಾಪೂರ ತಾಲ್ಲೂಕಿನ ಗೋಗಿಗೆ ಬಂದು ನೆಲೆಯೂರಿ ಪಾಮನಾಯಕನ ಶಹಾಪೂರ ಕಿಲ್ಲೆಯನ್ನು ಮುತ್ತುತ್ತಾನೆ. ಆದರೆ ಬೇಡವೀರರ ಎದಿರು ದೀಲೇರಖಾನನ ಆಟ ಸಾಗದೆ ಅಪಮಾನಿತನಾಗಿ ಸೋತು ಹಿಂದಿರುಗುತ್ತಾನೆ. ಈ ಸುದ್ದಿಯನ್ನು ಕೇಳಿದ ಔರಂಗಜೇಬನು ಆಶ್ಚರ್ಯದಿಂದ ''ಸದ್ ಆಪರಿನ ಬರ ಬೇಡರಾನ್, ಹಜಾರ ನಿಪರೀನ ಬರ ಬಹಾದುಕಿನ್'' ಎಂದನೆಂಬುದಾಗಿ ಐತಿಹ್ಯವಿದೆ. ಹೀಗೆಂದರೆ ''ಬೇಡ ವಿರರಿಗೆ ನೂರುಧನ್ಯವಾದಗಳು ನಮ್ಮ ಬಹಾದ್ದುರರಿಗೆ ಸಾವಿರ ತಿರಸ್ಕಾರಗಳು'' ಎಂದು ಅರ್ಥವಾಗುತ್ತದೆ.

ಪಾಮನಾಯಕನು ವಾಗಣಗೇರಿಯನ್ನು ಆಳುತ್ತಿದ್ದಾಗ ಔರಂಗಜೇಬನು ಸ್ವತಃ ದೇವಾಪುರದಲ್ಲಿ ತಿಂಗಳುಗಳ ಕಾಲ ಠಾಣೆಹೂಡಿ ವಾಗಿಣಗೇರಿಯನ್ನು ಮುತ್ತುತ್ತಾನೆ. ಆದರೆ ಆತನ ಸೈನ್ಯವು ದಿಕ್ಕೆಟ್ಟು ಚದುರಿಹೋಗಿ ದಿಗ್ಭ್ರಾಂತಗೊಳ್ಳುತ್ತಾನಲ್ಲದೆ ಬೇಡವೀರರ ಬಿಚ್ಚುಗತ್ತಿಯ ಜಳಪಿಗೆ ಕಣ್ಣುಕುಕ್ಕಿಸಿಕೊಂಡು ಓಡಿಹೋದ ಔರಂಗಜೇಬನು ದಿಲ್ಲಿಯನ್ನು ಮುಟ್ಟದೆ ದಾರಿಯಲ್ಲಿಯೇ ಎದೆಯೊಡೆದು ಸ್ವರ್ಗಮುಟ್ಟಿದ ಬಗ್ಗೆ ಐತಿಹಾಸಿಕ ದಾಖಲೆಗಳಿರುವುದನ್ನು ಎಲ್ಲರು ಬಲ್ಲರು. ಅಂತೆಯೇ ಔರಂಗಜೇಬನು ''ಬೇಡು ವೀರರನ್ನು ಕೆಣಕಬೇಡ! ಕೆಣಕಿ ತಿಣುಕಬೇಡ!'' ಎಂಬುದು ಸುರಪುರದ ವೀರರ ವೀರತ್ವವನ್ನು ಗಟ್ಟಿಗೊಳಿಸುತ್ತವೆ.

ಕ್ರಿ.ಶ. ೧೮೫೮ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕ ಕ್ರಾಂತಿವೀರನಾದ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಅಸಹಾಯಕ ಶೂರನಾಗಿ ಬ್ರಿಟಿಷರ ವಿರುದ್ಧ ದಂಗೆ ಎಬ್ಬಿಸುತ್ತಾನೆ. ದಕ್ಷಿಣ ಭಾರತದ ಎಲ್ಲಾ ಅರಸರ ಮುಂದಾಳತ್ವವನ್ನು ವಹಿಸಿ ಬ್ರಿಟಿಷ ಸಿಂಹದ ಹಲ್ಲನ್ನು ಕೀಳಲು ಹವಣಿಸಿ ಕೊನೆಗೆ ದೇಶದ್ರೋಹಿಗಳ ಒಳಸಂಚಿಗೆ ಸಿಕ್ಕು (ದುರಂತಕ್ಕೀಡಾಗುತ್ತಾನೆ) ಕೊಲೆಯಾಗುತ್ತಾನೆ.

**ಸಗರನಾಡಿನ ಶಿಲಾಶಾಸನಗಳು**

ಸಗರನಾಡಿಗೆ ಸಂಬಂಧಿಸಿದ ಐತಿಹಾಸಿಕ ಆಧಾರಗಳೆನಿಸುವ ಶಿಲಾಶಾಸನಗಳು ಹಲವಾರು ಕಡೆಗಳಲ್ಲಿ ದೊರೆಯುತ್ತವೆ. ಈ ದೆಸೆಯಲ್ಲಿ ಪೂರ್ವ ಪ್ರಯತ್ನ ಮಾಡಿದವರಲ್ಲಿ ಡಾ. ಜಾನ್ ಎಫ್ ಫ್ಲೀಟರು ಪ್ರಮುಖರು ಅವರು Epigraphia Indica Val XII - 1913-14ರಲ್ಲಿ ಏವೂರಿನ ಒಟ್ಟು ೬ ಶಾಸನಗಳನ್ನು ಮುದ್ರಿಸಿದ್ದಾರೆ.

| ಆಕರ | ಕಾಲ | ಆಳ್ವಿಕೆ | ವಿಷಯ |
|---|---|---|---|
| E.I.P No.268 | ಕ್ರಿ.ಪೂ. ೧೦೪೦ | ಚಾಲುಕ್ಯ ಜಯಸಿಂಹ-II | ಹೈಹಯವಂಶದ ಮಹೀಷಮ ಪುರಾಧೀಶ್ವರ ಬಿರುದಿನ ಮಹಾಮಂಡಲೇಶ್ವರ ರೇವರಸನು ಸಗರ-೩೦೦ರ ಪ್ರದೇಶವನ್ನಾಳುತ್ತಿದ್ದ. |

| | | | |
|---|---|---|---|
| E.I.P No.329 | ಕ್ರಿ.ಪೂ. ೧೧೦೫ | ವಿಕ್ರಮಾದಿತ್ಯ-VI | ಕೇಶವದೇವಾಲಯಕ್ಕೆ ಸತ್ಯ ಪ್ರಚಾರ ಭಟ್ಟಾರಕ ದೇವರ ಸಮಕ್ಷಮದಲಿ ಭೂ ಕಾಣಿಕೆ ನೀಡಿದ ದತ್ತಿಶಾಸನ ಇದರಲ್ಲಿ ಏಪೂರು, ಸಗರ-೩೦೦ ನಾಡಿನ ಉಲ್ಲೇಖಗಳಿವೆ. |
| E.I.P No.332 | ಕ್ರಿ.ಪೂ. ೧೧೧೦ | ವಿಕ್ರಮಾದಿತ್ಯ-VI | ಕೇಶವದೇವಾಲಯಕ್ಕೆ ದತ್ತಿ ನೀಡಿದ್ದು ಅಲ್ಲದೆ ೧೨೦ ಜನ ಬೇರೆ ಬೇರೆ ಕಾಣಿಕಗಳನ್ನು ಕೊಟ್ಟಿದ್ದು |
| E.I.P No.335 | ಕ್ರಿ.ಪೂ. ೧೧೭೩ | ಕಲಚೂರ್ಯ ರಾಯಮುರಾರಿ | ಮಲ್ಲಿಕಾರ್ಜುನ ದೇವಾಲಯದ ವ್ಯವಸ್ಥೆಗೆಂದು ತ್ರಿಪುರಾಂತಕ ದೇವರಸ ಎಂಬ ಮಹಾಪ್ರಭು ಭೂಮಿಯನ್ನು ದತ್ತಿಯಾಗಿ ನೀಡಿದ್ದು. |
| E.I.P No.336 | ಕ್ರಿ.ಪೂ. ೧೧೭೯ | ಕಲಚೂರ್ಯ ಸಂಕಮದೇವ | ಸ್ವಯಂಭು ಸೋಮನಾಥ ದೇವಾಲಯಕ್ಕೆ ದೇವರಸನು ಭೂಮಿಯನ್ನು ನೀಡಿದ್ದು. |
| E.I.P No.333 | ಕ್ರಿ.ಪೂ. ೧೧೨೫ | ಕಲಚೂರ್ಯ-VI | ಸೋಮೇಶ್ವರ ದೇವಾಲಯಕ್ಕೆ ದತ್ತಿ ನೀಡಿದ ವನು ತದೇಯ ದಂಡನಾಯಕ ಬಿರುದಿನ ಲಕ್ಷ್ಮಣಯ್ಯ ಒಳ ಊರು ಎಳ ಊರು, ಏವೂರು. |

ಅವುಗಳಲ್ಲಿ ಚಾಲುಕ್ಯ ೨ನೆಯ ಜಯಸಿಂಹನ ಕಾಲದ ಕ್ರಿ.ಶ. ೧೦೪೦ರ ಶಾಸನದಲ್ಲಿ ರೆವರಸ ದಂಡನಾಯಕನು. ಚಾಲುಕ್ಯ ೬ನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ. ೧೧೦೫ರ ಶಾಸನದಲ್ಲಿ ರವಿಯಣಭಟ್ಟನಾಯಕನು ಸಗರ ೩೦೦ ಪ್ರದೇಶವನ್ನಾಳುತ್ತಿದ್ದ ವಿವರ ಬಂದಿದೆ.

ಕ್ರಿ.ಶ. ೧೦೫೪ನೆಯ ಕೆಂಭಾವಿ ಶಾಸನ ಹಾಗೂ ಏವೂರಿನ ೧೦೭೭ನೆಯ ಕಾಲದ ಶಾಸನಗಳಲ್ಲಿ ಸಗರ -೩೦೦ರ ನಾಡೆಂದೇ ಇದು ಉಲ್ಲೇಖಿತವಾಗಿದೆ. ಆದರೆ ಕ್ರಿ.ಶ. ೧೧೬೯ರ ಕಲಚೂರಿ ರಾಯಮುರಾರಿ ಸೋವಿದೇವನ ಕಾಲದ ಕೊಲ್ಲೂರು (ಕೋಳೂರು) ಶಾಸನದಲ್ಲಿ ಸಗರ-೫೦೦ರ ಸಾಂದರ ಮಲ್ಲರಸಯ್ಯನಿಂದ ಚೇದಿವಂಶದ ಅಲ್ಲಹುಲಿ ದೇವನು ಐದು ದೇವಾಲಯಗಳನ್ನು ಕಟ್ಟಿಸಿದನು. ಆಗ ಸಗರ-೫೦೦ ನಾಡಿಗೆ ಬೊಮ್ಮಿದೇವ ದಂಡನಾಯಕನೆಂಬವನು ಮಹಾಪ್ರಧಾನನಾಗಿದ್ದನ್ನು ಇದೇ ರೀತಿ ೧೧೪೪ ಚಾಲುಕ್ಯ ೪ನೇಯ ಸೋಮೇಶ್ವರನ ಕಾಲದ ದೇವಪುರದ ಶಾಸನದಲ್ಲಿ ಸಗರ ಪ್ರದೇಶದ ಉಲ್ಲೇಖವಿದೆ. ಮರಬರಸ ದಂಡನಾಯಕನು ಸಗರನಾಡಿಗೆ ಸೇರಿದ ದೇವಪುರಕ್ಕೆ ಬಂದಾಗ ಅಲ್ಲಿಯ ದೇವಸ್ಥಾನಕ್ಕೆ ದತ್ತಿಬಿಟ್ಟ

ಉಲ್ಲೇಖವಿದೆ. ಈ ಕಾಲದಲ್ಲಿ ಸಗರ ೩೦೦ರ ಪ್ರದೇಶ ಸಗರ ೫೦೦ರ ನಾಡಾಗಿತ್ತೆಂಬುದು ಕೊಲ್ಲೂರು ಮತ್ತು ದೇವಪುರ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಇದರ ಬಗ್ಗೆ ಡಾ. ಜಾನ್.ಎಫ್. ಫ್ಲೀಟರು ಇನ್ನೂ ಹೆಚ್ಚಿನ ಸಂಗತಿಗಳನ್ನು ವಿವರಿಸಿ ಈ ವಿಷಯದ ಸಮಾಲೋಚನೆ ಮಾಡಿದ್ದಾರೆ.

ಕ್ರಿ.ಶ. ೧೧೨೪ ಹಿರೇಮುದ್ನೂರಿನ ಒಂದು ಶಾಸನದಲ್ಲಿ ಸಗರ ೫೦೦ರ ಉಲ್ಲೇಖ ೩ ಕಡೆಗೆ ಬಂದಿದೆ. ಇದಲ್ಲದೆ ಕ್ರಿ.ಶ. ೧೧೧೮ರ ಚಿಕ್ಕಮದ್ನೂರಿನ ಒಂದು ಶಾಸನದಲ್ಲಿ ಸಗರ ೫೦೦ರ ಪ್ರದೇಶವೆಂದೇ ವರ್ಣಿತವಾಗಿದೆ. ಸಗರ ೩೦೦ರ ನಾಡು ಸಗರ ೫೦೦ರ ಪ್ರದೇಶವಾದ ಕಾಲಮಾನವನ್ನು ಕುರಿತು ಡಾ.ಫ್ಲೀಟರವರು ಹೀಗೆ ಬರೆಯುತ್ತಾರೆ. ''It thos seems to have received on Increcye of extent at some time about A.D. 1110-1120 through on absorption of the whlle or part of the some adyustment district of districts lying probally on the east of the orivinal-300 ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯ ಡೈರೆಕ್ಟರ ಶ್ರೀನಾಗರಾಜರಾವ ಅವರು ರಾಷ್ಟ್ರಕೂಟ ಅಕಾಲವರ್ಷನ ಕಾಲದ ಒಂದು ಶಾಸನ ಶಹಾಪೂರ ತಾಲೂಕ ಶಿರವಾಳದಲ್ಲಿ ಸಿಕ್ಕಿದ್ದು ಅದರಲ್ಲಿ ಸಗರನಾಡು ಅಲ್ಲವುಂಡನ ಉಲ್ಲೇಖವಿರುವುದಾಗಿ ತಿಳಿಸಿದ್ದಾರೆ. ಶಿಲಾಶಾಸನ ಕಾಲ ಶಾಲಿವಾಹನ ಶಕೆ ೮೬೧ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದುದು. ಕಾಲ ಕ್ರಿ.ಶ. ೯೩೯ ರಿಂದ ೯೬೮ ಶಿರವಾಳದ ಇನ್ನೊಂದು ಶಾಸನ (ಕಾಲ ಶಕವರ್ಷ ೧೪೫೫)ದಲ್ಲಿ ಸಗರನಾಡೊಳಗೆ ಸಿರವಾಳಲ ಗ್ರಾಮ ಎಂಬ ಉಲ್ಲೆಖವಿದೆ. ಇದರಲ್ಲಿ ಶಿವಲಿಂಗಾಗನಾಗಿಯರು ಹನುಮಂತದೇವರ ದೇವಸ್ಥಾನಕ್ಕೆ ದತ್ತಿ ಬಿಟ್ಟ ವಿಷಯವಿದೆ.

ಶಿರವಾಳದ ೩ನೆಯ ಶಾಸನ ಚಾಲುಕ್ಯ ಭೂಲೋಕಮಲ್ಲನ (ಮೂರನೆಯ ಸೋಮೇಶ್ವರ ಅಳ್ವಿಕೆಯಲ್ಲಿ ಕ್ರಿ.ಶ. ೧೧೨೭-೧೧೩೮) ಮಹಾಮಂಡಳೇಶ್ವರ ಸೋವಿದೇವ ಅರಸನು ಸಗರವರ್ಯ ೭೦ಬಾಡದ ಹೆಗಡೆ ದಂಡನಾಯಕಂ ಅಲ್ಲಿಪೂರಿಯರಸರುಂ ಸಿರಿವೊಳಂ ಪ್ರಭು ನಾಲ್ವಕಿ ಸೆಟ್ಟಿಯರು ಕದಂಬೇಶ್ವರ ದೇವರ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದತ್ತಿ ಹಾಕಿಕೊಟ್ಟ ವಿಷಯವಿದೆ.

ಗುಲಬುರ್ಗಾ ಜಿಲ್ಲೆಯ ಸುರಪುರ ತಾಲೂಕು ಹಿರೇಮದ್ನೂರ ದೇವರದಾಸಿಮಯ್ಯನ ಗುಡಿಯ ಎಡಭಾಗದ ಗೋಡೆಯ ಮೇಲೆ ಬರೆದ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಕಾಲದ (ಕ್ರಿ.ಶ. ೧೧೩೮-೧೧೪೯) ಶಾಸನದಲ್ಲಿ ಸಗರ-೫೦೦ ೭೦ಬಾಡದ ಉಲ್ಲೇಖವಿದ್ದು ರಾಮಸೆಟ್ಟಿ ಎಂಬವನ್ನು ದತ್ತಿಬಿಟ್ಟ ಉಲ್ಲೇಖವಿದೆ.

ಚಿಕ್ಕಮುದ್ನೂರು ಗೋಪಾಲಸ್ವಾಮಿ ಗುಡಿಯ ಹಿಂಭಾಗದ ಮುಖಮಂಟಪದ ಶಿಲಾಸ್ಥಂಬದ ಮೇಲೆ ಬರೆದ ಶಾಸನವು ಶ್ರೀಮತು ಸಗರ ರೆಯಿನೋ೭೦ಬಾಡದ ಮುಖ್ಯ ಸೆಟ್ಟಿಯರು ಎಂದು ಆರಂಭವಾಗುತ್ತಿದ್ದು ಸಂಧಿವಿಗ್ರಹಿ ಆದಿಶೆಟ್ಟಿ ಎಂಬುವನು ದತ್ತಿಹಾಕಿಕೊಟ್ಟ ವಿವರವಿದೆ. ಇದರಲ್ಲಿ ಯಾವ ಅರಸು ಮನೆತನದ ಉಲ್ಲೇಖ ಇರುವುದಿಲ್ಲ.

ಚಿಕ್ಕ ಮುದ್ನೂರ ಗೋಪಾಲಸ್ವಾಮಿಯ ಗುಡಿಯ ಹಿಂಭಾಗದ ಬಲಗಂಬದ ಕೆಳನಿಟ್ಟಿನಲ್ಲಿ ಬರೆದ ಶಾಸನ ಇದು ಯಾದವ ಮನೆತನದ ಪ್ರತಾಪ ಚಕ್ರವರ್ತಿ ಸಂಘೂಣನ ಕಾಲದ್ದು (ಕ್ರಿ.ಶ. ೧೨೨೦-೧೨೪೭-) ಇದರಲ್ಲಿ ಸಗರ ರೆಯಿನೊಱಂಬಾಡದ ಸೆಟ್ಟಿಯರು ಮತ್ತು ಅಯ್ಯವಾವಿದ ಐನೂರ್ವರು ಸ್ವಾಮಿಗೆಮಿಂ ಇವರ ಉಲ್ಲೇಖವಿದೆ.

ಈ ಶಿಲಾಶಾಸನಗಳ ಪ್ರಕಾರ ಸಗರನಾಡು ರೆಯಿನೊಱಂಬಾಡ ಇದರ ಅಸ್ತಿತ್ವವು ರಾಷ್ಟ್ರಕೂಟ ಮುಮ್ಮಡಿಕೃಷ್ಣ. ಕಲ್ಯಾಣಿ ಚಾಲುಕ್ಯ ಮನೆತನದ ಜಗದೇಕಮಲ್ಲ ಭೂಲೋಕಮಲ್ಲರ ಕಾಲದಲ್ಲೂ ಮತ್ತು ಯಾದವ ಮನೆತನದ ಸಂಗಣನ ಕಾಲದಲ್ಲೂ ರಾಜಕೀಯ ಧಾರ್ಮಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನುಷಂಗಿಕವಾಗಿ ಪ್ರಸ್ತಾಪಿತವಾಗಿರುವುದು ಸ್ಪಷ್ಟವಾಗುತ್ತದೆ. ರಾಷ್ಟ್ರಕೂಟ ಅರಸುಮನೆತನದ ಆಳ್ವಿಕೆಯನ್ನು ಮಳಖೇಡದಲ್ಲಿ ನಿಗದಿಗೊಳಿಸುವ ಅತ್ಯಂತ ಪ್ರಮುಖ ಶಿಲಾಶಾಸನ ಸಿರವಾಳದಲ್ಲಿ ಸಿಕ್ಕಿರುವುದು ಅಪೂರ್ವ ಸಂಗತಿಯಾಗಿದೆ. ಈ ಶಾಸನದಲ್ಲಿ ಸಗರನಾಡಿನ ಉಲ್ಲೇಖವಿರುವುದಲ್ಲದೆ ಸಿರವಾಳ ಗ್ರಾಮವು ರಾಷ್ಟ್ರಕೂಟರ ಕಾಲದ ಪ್ರಸಿದ್ಧ ವಾಣಿಜ್ಯ ಸ್ಥಳವಾಗಿತ್ತೆಂಬುದು ಮತ್ತು ಅನೇಕ ದೇವಸ್ಥಾನಗಳ ಬೀಡಾಗಿತ್ತೆಂಬುದು ನಿಶ್ಚಿತವಾಗುತ್ತದೆ.

ಅದೇ ರೀತಿ ಚಾಲುಕ್ಯ, ಕಳಚೂರಿ ಮತ್ತು ಯಾದವರ ಶಾಸನಗಳಲ್ಲಿ ಹಲವು ಹತ್ತುಕಡೆಗಳಲ್ಲಿ ಸಗರನಾಡಿನ ಉಲ್ಲೇಖವಿದ್ದು. ಮುದನೂರ ಸಗರನಾಡಿನ ಪ್ರಮುಖ ಧಾರ್ಮಿಕ ಕೇಂದ್ರವೆಂದು ಹೆಸರಾಗಿತ್ತು. ಅಲ್ಲದೆ ಅಲ್ಲಿನ ರಾಮೇಶ್ವರ ಮತ್ತು ಲಕ್ಷ್ಮಣೇಶ್ವರ ದೇವತಾ ಮಂದಿರ ಮತ್ತು ದೇವತೀರ್ಥಗಳಿಂದ ಕೂಡಿದ್ದು. ಶಿಲಾಶಾಸನಗಳಲ್ಲಿ ಈ ಮುದನೂರನ್ನು ದಕ್ಷಿಣವಾರಣಾಸಿ ಎಂದು ಉಲ್ಲೇಖಿಸಿರುವುದು ಈ ನಾಡಿನ ಸಾಂಸ್ಕೃತಿಕ ಹಿರಿಮೆಗೆ ನಿದರ್ಶನವಾಗಿದೆ.

ರಾಷ್ಟ್ರಕೂಟ ಮತ್ತು ಚಾಲುಕ್ಯ ಕಾಲದ ಶಿಲಾಶಾಸನಗಳಲ್ಲಿ ಸಗರ ೫೦೦ರ ಪ್ರಾದೇಶಿಕ ಘಟಕದ ಉಲ್ಲೇಖವಿದೆ. ಆದರೆ ಡಾ.ಶ್ರೀನಿವಾಸ ರಿತ್ತಿಯವರು ತಮ್ಮ ಮಹಾಪ್ರಬಂಧದಲ್ಲಿ ಸಗರ ೩೦೦ ಘಟಕವನ್ನು ಉಲ್ಲೆಖಿಸುತ್ತಾರೆ. ಇದನ್ನು ಆಧರಿಸಿ ಡಾ.ವಿ.ಶಿವಾನಂದ ಅವರು ಸಗರನಾಡಿನ ಶಿವ ಶರಣರು ಎಂಬ ಪುಸ್ತಕದಲ್ಲಿ ಈ ನಾಡಿನ ನಕಾಶೆವೊಂದನ್ನು ಸಿದ್ಧಪಡಿಸಿ ಅದರ ಗಡಿಗೆರೆಗಳನ್ನು ಕುರಿತು ಹೀಗೆ ಹೇಳಿದ್ದಾರೆ.

**ಸಗರನಾಡಿನ ಗಡಿಗೆರೆಗಳು**

೧. ಪೂರ್ವ ಎಡದೊರೆ ಎರಡು ಸಾಸಿರ

೨. ಪಶ್ಚಿಮ ತರ್ದವಾಡಿ ಸಾಸಿರ

೩. ಉತ್ತರ ಅಲಂದೆ ಸಾಸಿರ

೪. ದಕ್ಷಿಣ ಕರಡುಕಲ್ಲು ಮುನ್ನೂರು

ಇವುಗಳ ಮಧ್ಯದಲ್ಲಿ ಕೃಷ್ಣಾ ಹಾಗೂ ಭೀಮಾ ನದಿಗಳು ಹರಿಯುವ ಮೇರೆ ಗುಂಟ (ಸಗರನಾಡು ವ್ಯಾಪಿಸಿದ್ದಿತು. (ಸಗರನಾಡಿನ ಶಿವಶರಣರು ಲೇಖನ ಪು.೨)

"ಸಮಭೂಮದ್ಯ ರೇಖಾಯಾಂ !

ಶ್ರೀಶೈಲಸ್ಯ ಪಶ್ಚಿಮೇ ಕೃಷ್ಣವೇಣಿ ಭಿಮರತ್ಯುಃ

ಮದ್ನೆ ಜಗತಿಪಾವನೆ ಸೂರ್ಯವಂಶ ಕುಲೋತ್ನ್ನ

ಸಗರೆಣ ವಿನಿರ್ಮಿತಂ ಸಗರಂ ನಗರಂ ನಾಮ

ಜಯತ್ಯದ್ಯಾಪಿ ವಿಶ್ರುತಂ"

ಜಮದಾಗ್ನಿ ಕುಲೋತ್ಪನ್ನ ಗಂಗಾಧರ ಪಂಡಿತೇನ ವಿರಚೇತಂ ಚಾಂದ್ರಮಾನ ಗ್ರಂಥದಲ್ಲಿ ಈ ರೀತಿ ಉಲ್ಲೇಖಿಸಲ್ಪಟ್ಟಿದೆ.

ಪರಿವೆಸೆವ ಸುರಪುರ ಸುಶಾಪುರ

ದೆರಡು ತಾಲೂಕುಗಳವರೆಗಿರುತಿರುವ ಪ್ರಾಂತಕೆ ಸಗರನಾಡೆಂದೆನುತೆ ಪೆಳುಮಾ

ಸುರಚಿಶವ ಷನಸಗರನಾಡಿದು

ಪರಮಭಕ್ತಿಯ ಬೀಡು ಪಲದಿಂ

ಭರಿತಮಗಿಹ ವೃಕ್ಷತತಿಗಳ ಷನತರದ ಕಾಡು

(ಶ್ರೀ ಚರಬಸವೇಶ್ವರ ಪುರಾಣ ೭ನೆಯ ಸಂಧಿ ಪುಟ ಸಂಖ್ಯೆ ೧೪) ಎಂದು ವರ್ಣಿಸಲ್ಪಟ್ಟಿರುವದು ಈ ನಾಡಿನ ಹಿರಿಮೆಯ ನೈಜತೆಯನ್ನು ಸ್ಪಷ್ಟಪಡಿಸುತ್ತದೆ.

ಜಳೆಯುತೀವಿದ ಪೊಲಗಳಿಂದ |

ಪಲಿತ ವಿವಿಧ ಕುಜಂಗಳಿಂದಂ |

ಚೆಲುವ ಗುಡಿಗೋಪುರದ ಪೊಳಿಲುಗಳಿಂದ ವೀರನೃಪ |

ಲಲಿತ ಕವಿಶಿಲ್ಪಿಗಳ ತಲೆಯಿಂ

ತೊಳಪ ಶಿವಗುರು ಶರಣದಾಸರ

ಬಳಗದಿಂ ಪೆರ್ಮೆಯನು ತಳೆದು ವಿರಾಜಿಪುದು

ತಿರಿಯೊಳ

(ಚರಬಸವೇಶ್ವರ ಪುರಾಣ ಪು.ಸಂ. ೧೪) ಎಂದು ಉಲ್ಲೇಖಿಸಲ್ಪಟ್ಟಿರುವುದು ಈ ನಾಡಿನ ಸಡಗರ ಸಮೃದ್ಧಿ ಮತ್ತು ಸಂಸ್ಕೃತಿ ಸೌಜನ್ಯತೆಗಳ ನಿದರ್ಶನ

ಕೊಟೆನು ಬಿದರೆಯ ಕೊಟ್ಟಿನು ಸಗರವ...........

(ರಾಮನಾಥ ಚರಿತ್ರೆ ಸಂಪುಟ -೨ ಸಂಧಿ-೧೭ ಪದ್ಯ ೬೬)

ಸಾಗರದಾನವೆಂಮಂ ದೆಸೆಗಳೊಳು...........

ಸಾಗರದಾನದ ಮುಂದೆ ಸರಾಗ್ರಾದುಪಿನು ಎಸಗಿ ........

ಕುರುಕೊಂಕಣ ಹೊಣ ಹೊಯ್ಸಳ ತುಳುವಕು

ಕರಜನ ಸಗರಬಂಗಾಳ..............

ತುರುಕಯವಂತಿ ಕಾಶ್ಮರ ದೇಶಾಧಿ.....

ಶ್ವರ ರೋಡಿದರು ರಾಮನಿಗೆ

ಈ ಕಾವ್ಯ ಚಾರಿತ್ರಿಕ ಮಹತ್ವವೆಂದು ಡಾ.ಎಮ್.ಎಚ್. ಕೃಷ್ಣಾ ಅವರು (ಎಂ.ಎ.ಆರ್. ೧೯೨೯, ಪು. ೩೭) ಉಲ್ಲೇಖಿಸಿದ್ದಾರೆ. ಚಾಲುಕ್ಯರ ಕಾಲದಲ್ಲಿ ಸಗರದುರ್ಗ ಎಂಬ ಹೆಸರನ್ನು ಪಡೆದಿತ್ತು.

ಈ ರೀತಿ ಸಗರನಾಡಿಗೆ ಸಂಬಂಧಪಟ್ಟ ಚಾರಿತ್ರಿಕ ಅಥವಾ ಐತಿಹಾಸಿಕ ದಾಖಲೆಗಳು ಸಗರನಾಡಿನ ಉಜ್ವಲ ವೀರಪರಂಪರೆಯನ್ನು ಮತ್ತು ಧಾರ್ಮಿಕ ಪರಂಪರೆಯನ್ನು ದೃಢಿಕರಿಸುತ್ತವೆ. ಕಾಲ ಪರಿಸರಗಳಲ್ಲಿ ಸಗರನಾಡಿನ ರಾಜಕೀಯ ಜೀವನದಲ್ಲಿ ಎಷ್ಟು ಸಾಮಾಜಿಕ ಜೀವನದಲ್ಲಿ ಸ್ಥಿತ್ಯಂತರಗಳು ಸಂಭವಿಸಿದಾಗಲೂ ಈ ನಾಡಿನಲ್ಲಿ ಆಯಾ ಮತದವರು ಪರಂಪರೆಯ ಶ್ರದ್ಧೆ ನಿಷ್ಠೆಗಳಿಂದ ಮತ್ತು ಸಾಹಿತ್ಯವನ್ನು ಮತ್ತಿತರ ಸೃಷ್ಟಿಶೀಲ ಕೃತಿ ರಚನೆಯನ್ನು ಮುಂದುವರೆಸಿಕೊಂಡು ಬಂದರೆಂಬುದು ಗಣನೀಯ ಸಂಗತಿಯಾಗಿದೆ.

೧೦-೧೧ನೆಯ ಶತಮಾನಗಳ ಕಾಲಾವಧಿಯಲ್ಲಿ ಶಾಸನ ಸಾಹಿತ್ಯವು ಈ ಭಾಗದಲ್ಲಿ ಅಧಿಕೃತವಾಗಿ ದೊರಕುತ್ತಿದ್ದು. ಮುಂದೆ ಬಂದ ಈ ಪರಿಸರದ ವಚನಕಾರರಿಗೂ ಕವಿಗಳಿಗೂ ಕನ್ನಡ ಭಾಷೆಯನ್ನು ಸಂಸ್ಕೃತ ಮಟ್ಟದಲ್ಲಿ ರೂಪಿಸುವುದಕ್ಕೆ ತಕ್ಕ ನೆಲೆಗಟ್ಟಾಗಿತ್ತು. ವೀರರನಾಡೆಂದು ಬೇಡರ ಬೀಡೆಂದು ಸಂಸ್ಕೃತಿಯ ಕೈವಾರಿಯೆಂದು ಸಾಹಿತ್ಯ-ಸಂಗೀತ ಕಲೆಗಳ ತವರೆಂಬ ಕೀರ್ತಿಗೆ ಸಂದ ಸಗರನಾಡಿದು.

# ಅಧ್ಯಾಯ ೩

## ಸಗರನಾಡಿನ ಬೇಡ ಸಮುದಾಯ

ಪ್ರಾಚೀನ ಕಾಲದಿಂದಲು ಬೇಡ ಸಮುದಾಯದ ಬಗ್ಗೆ ಹಲವಾರು ಸಾಕ್ಷಾಧಾರಗಳಿಂದ, ಐತಿಹ್ಯಗಳಿಂದ ಗ್ರಂಥಗಳಿಂದ, ಪುರಾಣಗಳಿಂದ, ತಿಳಿದುಕೊಳ್ಳಬಹುದು. ಬೇಟೆಯನ್ನು ತಮ್ಮ ವೃತ್ತಿ ಬದುಕಿನ ಅವಿಬಾಜ್ಯ ಅಂಗವೆಂದು ತಿಳಿದುಕೊಂಡ ಬುಡಕಟ್ಟು ಜನಾಂಗವು ಬೇಡರು ಎಂದು ಕರೆಯಿಸಿಕೊಂಡ ಬಗ್ಗೆ ನಮ್ಮಲ್ಲಿ ವರ್ಣರಂಜಿತ ಐತಿಹಾಸಿಕ ಹಿನ್ನೆಲೆಯೇ ಇದೆ. ಕಾಡು ಕಣಿವೆ ಗುಡ್ಡಗವಿಗಳನ್ನು ತಮ್ಮ ವಾಸಸ್ಥಳ ಮಾಡಿಕೊಂಡ ಇವರು ತೊಗಟೆಯನ್ನು ಉಡುಪಾಗಿ ಧರಿಸಿದರು. ಆದಿ ಮಾನವನ ಎಲ್ಲಾ ಅವ್ಯವಸ್ಥೆಗಳನ್ನು ಹೊತ್ತುಕೊಂಡು ಇವರು ಕ್ರೂರ ಪ್ರಾಣಿಗಳ ಮಧ್ಯೆ ಬಾಳಿದವರು. ಇಂತ ಬೇಡ ಜನಾಂಗದ ರೋಮಾಂಚನ ಹೆಜ್ಜೆಗಳನ್ನು ನಾವು ಬೃಹದಾಕಾರದ ಗುಡ್ಡ ಬೆಟ್ಟ ಗೆವಿ ಕೋಟೆ ಕೊತ್ತಲುಗಳನ್ನು ಹೊಂದಿರುವ ಗಂಡು ಮೆಟ್ಟಿನ ಸಗರನಾಡಿನಲ್ಲಿ ನೋಡಬಹುದು. ಆದಿಬಗವಂತನ್ನು ಬೇಡರ ಚುಂಚಲಕ್ಷ್ಮಿಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನಂತೆ, ಹಳೆಗನ್ನಡದಲ್ಲಿ ಬೇಡರ, ವಾಳರ, ವೀಧಿರ, ಬೀಲ್ಲ, ಬೇಟೆವರ ಬೇಂಟೆಕರ, ವಿಯವರಯಧರ, ಕಣಿಧರ, ಕೊವರ, ಎಂಬ ನಾಮಗಳಿವೆ. ರಾಷ್ಟ್ರಕೂಟರ ಅಪ್ರಬಂಧ ಭಾಷೆಯಲ್ಲಿ ನಾಹಲ, ನಾಹಿಲ್ಲ, ನಾಹಿಲ್ಲ, ಸಮರ, ನಿಮಿರ, ಬೇಲಡ, ಮುಂತಾಗಿ ಗುರುತಿಸಲಾಗಿದೆ ಈ ಎಲ್ಲ ಪದೆಗಳು ಬೇಡ ಜನಾಂಗದ ವ್ಯಾಪ್ತಿಯನ್ನು ಸ್ಪಷೀಕರಿಸುತ್ತದೆ.

ಬೇಡ ಜನಾಂಗದ ಮೂಲ ಪುರುಷ ವಾಲ್ಮೀಕಿ ಎಂದು ಹಲವಾರು ಸಂಶೋಧಕರ ಸಂಶೋದನೆಯ ಮೂಲಕ ಗೊತ್ತಾಗಿದೆ. ಬೇಡರ ಯಜಮಾನನಾದ ಇತ ಕಾಮಕೇತು, ಲಕ್ಷ್ಮಮೀನು, ಮಲರ, ಎಂಬ ಏಳು ಜನ ಮಕ್ಕಳ ನೇತೃತ್ವದಲ್ಲಿ ಏಳು ಪಡೆಗಳನ್ನು ರಚಿಸಿ ದರೋಡೆ ನಡೆಸುತ್ತಿದನ್ನು ಮುಂದೆ ಕಾಡಿನಲ್ಲಿ ಕಾಲಸಂತರ ಚದುರಿಹೋದ ಈ ಪಡೆಗಳು ಬೇಡ ಜನಾಂಗದ ವಂಶ ವಿಕಾಸಕ್ಕೆ ನಾಂದಿ ಹಾಡಿದವು. ಎಂಬ ಐತಿಹ್ಯವಿದೆ, ಚದುರಿಹೋದ ಇಂತಹ ಬೇಡ ಪಡೆಯ ತುಕಡಿಗಳು ಸಗರನಾಡಿನಲ್ಲಿಯೂ ನೆಲೆಯೂರಿದ್ದವು ಎಂಬುವುದರಲ್ಲಿ ಸಂಶಯವಿಲ್ಲ.

ವಾಲ್ಮೀಕಿ. ತ್ರೇತಾಯುಗದ ಮೂಲ ಸಂವೇದನೆಯನ್ನು ಬದುಕಿನ ಮೌಲ್ಯವನ್ನು ಸೋಲು ಗೆಲುವಿನ ಮೌಲ್ಯಗಳನ್ನು ಒಟ್ಟಾಗಿ ಹಿಡಿದಿಟ್ಟ ದಾರ್ಶನಿಕ ಶಕ್ತಿ, ವಾಲ್ಮೀಕಿಗೆ ದಕ್ಕಿತು. ಮತ್ತು ಅದು ರಾಮಾಯಣ ರೂಪದಲ್ಲಿ ಹೊರಬಿತ್ತು, ಇಂಥ ಶಕ್ತಿ ಸಿಗುವ ಮುನ್ನ ಆದಿಮಾನವನಂತೆ ಅಡವಿಯಲ್ಲಿ ಅಲೆಯುತ್ತಿದ್ದ ವಾಲ್ಮೀಕಿ ಪ್ರಚೇತನ ಮತ್ತು ಪ್ರಮೋಜಿಯರ ಮಗನಾಗಿ ಹುಟ್ಟಿ ತಾಮಸ ನದಿ ತೀರದಲ್ಲಿ ವಾಸವಾಗಿದ್ದನು. ನಂತರ ಬೇಡರ ಯಜಮಾನನಾಗುವ ಮೂಲಕ ಸದಾ ಖಡ್ಗದಾರಿಯಾಗಿದ್ದ ಇವರು ಯುದ್ಧಕ್ಕಾಗಿ ಹೋರಾಡುವ ಸೈನಿಕರಾಗಿದ್ದರು. ಆದುದ್ದರಿಂದಲೇ ಬೇಡ ಸಮುದಾಯದವರು ವಾಲ್ಮೀಕಿಯನ್ನು ತಮ್ಮ ಮೂಲ ಪುರುಷ, ದೇವರು ಎಂದು ತಿಳಿದು ಇಂದಿಗೂ ಪೂಜಿಸುತ್ತ ಬರುತ್ತಿದ್ದಾರೆ.

೧೯೮೧ ರ ಜನಗಣಿತಯ ಪ್ರಕಾರ ಬೇಡ ಸಮುದಾಯದವು ಕರ್ನಾಟಕದಲ್ಲಿ ೪೦ ಲಕ್ಷದಷ್ಟಿತ್ತು ಗುಲಬರ್ಗಾ ರಾಯಚೂರು ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಈ ಜನ ದಟ್ಟವಾಗಿದೆ. ಕೋಲಾರ, ತುಮಕೂರ, ಮೈಸೂರು ಹಾಗೂ ಶಿವಮೊಗ್ಗ ಜಿಲ್ಲೆಗಳ ಕೆಲಭಾಗದಲ್ಲಿಯು ಬೇಡರ ಜನಾಂಗ ವಿಫುಲವಾಗಿದೆ. ಹಾಗೆಯೇ ಸಗರ ನಾಡಿನ ಸುರಪುರ ಶಹಾಪುರ ಜೇವರ್ಗಿ ಯಾದಗಿರಿ ಜಿಲ್ಲೆಯಲ್ಲಿರುವ ಇವರ ಸಂಖ್ಯೆ ಅಧಿಕವಾಗಿದೆ. ಸಗರನಾಡಿನಲ್ಲಿ ಈ ಜನಾಂಗಕ್ಕೆ ಬೇಡರು ಅಂತ ಹೆಸರು ಬರಲು ಕಾರಣ ಈ ಜನಾಂಗದವರು ವೇದಕಾಲದಿಂದ ಬಂದಿದ್ದರಿಂದ ವೇದ ಎಂಬ ಶಬ್ಧವು ರೂಢಿಯಲ್ಲಿ ಬಂದಿತ್ತು. ವೇದ ಎಂದರೆ ಬೇಟೆಯಾಡುವವರು ಅದರಿಂದ ಈ ಜನಾಂಗಕ್ಕೆ ಬೇಟೆ ಎಂಬ ಶಬ್ಧ ಬದಲಾವಣೆ ಹೊಂದಿ, ಬೇಡ ಎಂದು ಕರೆಯುವ ರೂಢಿಗೆ ಬಂದಿತ್ತು. ಬೇಡರು ಎಂಬುದು ಉರ್ದು ಶಬ್ದ, ಉರ್ದು ಭಾಷೆಯಲ್ಲಿ ಬೇಡರು ಎಂದರೆ ಯಾರಿಗೂ ಹೆದರದವರು ಎಂದರ್ಥ ಕಾರಣ ಸುಮರು ೧೫೦ ವರ್ಷ ಹಿಂದೆ ಹೈದ್ರಾಬಾದ್ ನಿಜಾಮ್‌ನ ಆಳ್ವಿಕೆಗೆ ಸಗರನಾಡು ಒಳಪಟ್ಟಿತ್ತು ಆಗ ಉರ್ದು ಭಾಷೆ ಹೆಚ್ಚು ಪ್ರಚಲಿತದಲ್ಲಿತ್ತು. ಹೀಗೆ ಇದ್ದರು ಕೂಡ ಸುರಪುರದ ಸಂಸ್ಥಾನದ ರಾಜರುಗಳು ಸ್ವತಂತ್ರರಾಜರುಗಳಾಗಿ ಯಾರಿಗೂ ಅಂಜದೆ ರಾಜ್ಯಭಾರವನ್ನು ಮಾಡುತ್ತಿದ್ದರು. ಅಂತೆಯೇ ಮುಸ್ಲಿಂ ಅರಸರುಗಳು ಇವರನ್ನು 'ಬೇಡರ್' ಎಂದು ಕರೆಯುತ್ತಿದ್ದರು. ಅಂದರೆ ಅವರ ಭಾಷೆಯಲ್ಲಿ ಯಾರಿಗೂ ಹೆದರದವರು ಎಂದರ್ಥ. ಬೇಡ ಜನಾಂಗದವರು ಯಾರಿಗೂ ಹೆದರದೆ ಇದ್ದ ಶೂರಜನರು ಜೀವನದಲ್ಲಿ ಸುಖವಿರಲಿ ದುಃಖವಿರಲಿ ಭಾವಾವೇಶಕ್ಕೆ ಒಳಗಾದೆ ನಗು ನಗುತ ಇರುವ ಜನ, ವೈರಿಗಳಿಗಂತೂ ಸಿಂಹಸ್ವಪ್ನವಾಗಿ ಕಾಡುತ್ತಿದ್ದರು. ಎದೆ ಗುಂದದೆ ಹೋರಾಡುತ್ತಿದ್ದರು ಆದ್ದರಿಂದ ಬೇಡರು ದೇಶದಾದ್ಯಂತ ದೇಶಭಕ್ತರಾಗಿ, ಸಂಸ್ಕೃತಿ ರಕ್ಷಕರಾಗಿ, ಜನಪ್ರಿಯತೆಯನ್ನು ಹೊಂದಿದ್ದರು.

ಸಗರನಾಡಿನ ಸುರಪುರದ ರಾಜ ಗಡ್ಡಿಪಿಡ್ಡನಾಯಕನ ಪರಾಕ್ರಮಕ್ಕೆ ಮೆಚ್ಚಿದ ಮೊಘಲ್ ಚಕ್ರವರ್ತಿಯಾದ ಔರಂಗಜೇಬನು "ನೀನು ಮುಸ್ಲಿಮನಾಗಿದ್ದರೆ, ನಮ್ಮ ಧರ್ಮ ಬಂದುವಾಗಿರುತ್ತಿದ್ದಿಯಲ್ಲದೆ ಭಾರತದ ಯಾವ ಅರಸರ ಅಂತಕಕ್ಕೂ ಒಳಗಾದೆ ಸುರಕ್ಷಿತವಾಗಿರುತ್ತಿದೆ. ಮುಸ್ಲಿಂಮನಾಗಲಿಲ್ಲವಲ್ಲ ಎಂದು ಬಲವಾದ ಖೇದವಾಗುತ್ತಿದೆ." ಎಂದು ಅತ್ಯಂತ ಗೌರವವಾಗಿ ಬರೆದು ಕೊಟ್ಟ, ಹಾಗೂ ಸುರಪುರ ಅರಮನೆಯಲ್ಲಿ ಸುರಕ್ಷಿತವಾದ ಈ ದೊಡ್ಡದಾದ ಪತ್ರದಲ್ಲಿ ಔರಂಗಜೇಬನ ಅಸ್ತಾಕ್ಷರ ಮತ್ತು ರಾಜ್ಯ ಮುದ್ರೆಯಲ್ಲದೆ

ಚಂದನವಲ್ಲಿ ಅದ್ದಿದ ಬಲಗೈಯನ್ನು ಮುಡಿಸಿದ ಇಂತಹ ಪತ್ರವು ಸಗರನಾಡನ್ನು ಬಿಟ್ಟು ಬೇರೆ ಎಲ್ಲಿಯೂ ಇಲ್ಲ, ಇಂತಹ ವೀರತನದ ಧೀರ ಹೆಗ್ಗಳಿಕೆಗೆ ಈ ಸಗರ ನಾಡಿನ ಬೇಡ ಸಮುದಾಯದವರು ಪಾತ್ರರಾಗಿದ್ದಾರೆ. ಪಾಮನಾಯಕನು ಸಗರನಾಡಿನ ಸುರಪುರುದ ವಾಗಣಗೇರಿಯನ್ನು ಆಳುತ್ತಿದ್ದಾಗ ಔರಂಗಜೇಬನು ಸ್ವತ ದೇವಪುರದಲ್ಲಿ ತಿಂಗಳುಗಳ ಕಾಲ ಇದ್ದು ಬೇಡ ಸಮುದಾಯದವರ ಜೊತೆ ಅಥವಾ ಸೈನಿಕರ ಜೊತೆ ಯುದ್ಧ ಮಾಡಲಾಗದೆ ಹೋಡಿ ಹೋಗುವ ಸಂದರ್ಭದಲ್ಲಿ ಎದೆಯೊಡೆದು ಸ್ವರ್ಗ ಮುಟ್ಟಿದ ಬಗ್ಗೆ ಐತಿಹಾಸಿಕ ದಾಖಲೆಗಳಿರುವುದು ಎಲ್ಲರೂ ಬಲ್ಲರು. ಅಂತ್ಯೆಯೇ ಔರಂಗಜೇಬನು ''ಬೇಡ ವೀರರನ್ನು ಕೆಣಕ್ಕಬೇಡ! ಕೆಣಕಿ ತಿಣುಕಬೇಡ!! ಎಂದು ಹೇಳಿದ ಮಾತು ಸಗರ ನಾಡಿನ ಬೇಡ ಸಮುದಾಯದ ವೀರತ್ವವನ್ನು ತೋರಿಸುತ್ತದೆ.

ಅದೇರೀತಿಯಾಗಿ ಕ್ರಿ.ಶ. ೧೮೫೭-೫೮ರ ಸ್ವತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದ ಕ್ರಾಂತಿ ವೀರನಾದ ನಾಲ್ವಡಿ ರಾಜ ವೆಂಕಟನಾಯಕನು ಬ್ರಿಟೀಷರ ವಿರುದ್ಧ ದಂಗೆ ಎದ್ದು ಬೇಡ ಸಮುದಾಯಕ್ಕೆ ಕರೆಕೊಟ್ಟು ದಕ್ಷಿಣ ಭಾರತದ ಎಲ್ಲಾ ಅರಸರ ಮುಂದಾಳತ್ವವನ್ನು ವಹಿಸಿ ಬ್ರಿಟೀಷರಿಗೆ ಸಿಂಹಸ್ವಪ್ನವಾಗಿ ಕಾಡುತ್ತಾನೆ.

ಹೀಗೆ ಮಹಾವೀರಾಧಿವೀರರಾಗಿದ್ದ ಸಗರನಾಡಿನ ಬೇಡ ಜನಾಂಗದ ರಾಜರುಗಳು, ಪಾಳೆಗಾರರು, ಸೈನಿಕರು, ಮಹಾ ದೇಶಾಭಿಮಾನಿಗಳಾಗಿದ್ದು ಯಾವ ದುರಾಗ್ರಹಿಗಳ ಪ್ರಭಾವಕ್ಕೆ ಒಳಗಾಗದೆ ಹಿಂದೂ ಸಂಸ್ಕೃತಿಯ ರಕ್ಷಕರಾಗಿ ಈ ನಾಡನ್ನು ಪಾಲಿಸಿದ್ದಾರೆ. ಸಗರನಾಡಿನ ಬೇಡ ಸಮುದಾಯದವರ ಚರಿತ್ರೆಯನ್ನು ನೋಡಿದಾಗ ಇಲ್ಲಿಯ ಬೇಡರು ಕಲೆ, ಸಾಹಿತ್ಯ, ಸಂಗೀತ, ಮುಂತಾದವುಗಳನ್ನು ಕಲಿಯುತ್ತಿದ್ದರು. ಸಗರನಾಡು ವೈಭವದಿಂದ ನೂರಾರು ವರ್ಷಗಳವರೆಗೆ ಹೆಸರು ವಾಸಿಯಾಗಿ ಬಾಳಿ ತನ್ನ ಕೀರ್ತಿಯನ್ನು ಉಳಿಸಿಕೊಂಡು ಬಂದಿದೆ. ಈ ಕೀರ್ತಿಗೆ ಇಲ್ಲಿಯ ಪ್ರಾಮಾಣಿಕರಾದ ಪ್ರಜೆಗಳು ಹಾಗೂ ಬೇಡ ವೀರ ಸೈನಿಕರೆ ಕಾರಣರಾಗಿದ್ದಾರೆ. (ಲೇಖಿನ ದಿಲ್ಲಿಯನ್ನು ನಡುಗಿಸಿದ ಸುರಪುರದ ಶಿಸ್ತಿನ ಸೈನ್ಯ ಪು. ೨೭೭ ರಿಂದ ೨೮೧)

ಸಗರನಾಡಿನ ಬೇಡ ಸಮುದಾಯದ ಬಗ್ಗೆ ಹಿರಿಯರಿಂದ ಹಾಗೂ ಹಲವಾರು ಆಧಾರ ಗ್ರಂಥಗಳಿಂದ ಐತಿಹ್ಯಗಳಿಂದ ಕೇಳಿದ್ದು ಹೇಳಬೇಕಾದರೆ ರಷ್ಯ, ಚೀನಾ ಮತ್ತು ಇತರ ವಿದೇಶಗಳಲ್ಲಿ ಈಗಿರುವ ಸೈನ್ಯದ ಶಿಸ್ತು ಮತ್ತು ಸೈನ್ಯದ ಪದ್ಧತಿ. ಹಾಗೂ ಕಾರ್ಯಾಚರಣೆ ಸುರಪುರ, ಸಂಸ್ಥಾನದ ಅಥವಾ ಸಗರನಾಡಿನ ಬೇಡರ ಸೈನ್ಯದಲ್ಲಿ ಮೊದಲೇ ರೂಡಿಯಲ್ಲಿತ್ತು. ನಂತರ ರಾಜಾ ಮಂಡಗೈ ವೆಂಕಟಪ್ಪನಾಯಕರ ಆಳ್ವಿಕೆಯಲ್ಲಿ ನವೀಕರಿಸಲಾಯಿತು. ಆದಿಲ್‌ಶಾಹಿ, ಮರಾಠರು, ಮತ್ತು ಹೈದ್ರಾಬಾದ್ ನಿಜಾಮರು ಕಾಲಕಾಲಕ್ಕೆ ಇವರ ಸಹಾಯ ಪಡೆದು ತಮ್ಮ ವೈರಿಗಳನ್ನು ಎದುರಿಸಿದುದ್ದನ್ನು ನೋಡಿದರೆ ಈ ಬೇಡ ಸಮುದಾಯದ ಸೈನ್ಯದ ವೀರರ ಶೌರ್ಯದ ಕೀರ್ತಿಯ ಬಗ್ಗೆ ಆಶ್ಚರ್ಯವಾಗುತ್ತದೆ. ದಕ್ಷಿಣ ಭಾರತದಿಂದ ಉತ್ತರ ಭಾರತದಲ್ಲಿ ಈ ನಾಯಕರ ವೀರ ಪ್ರತೀಕವಾದ ವಾರ್ತೆಗಳು ಹಬ್ಬಿದ್ದವು. ಸಗರನಾಡಿನಲ್ಲಿ ಬೇಡ ಸಮುದಾಯದಲ್ಲಿ ಹುಟ್ಟಿದ ಮಗುವಿನ ಹೆಸರನ್ನು ಗುರಿಕಾರನು ಬರೆದುಕೊಂಡು ಸುರಪುರದ ಸಂಸ್ಥಾನದ ಖಜಾನೆಯಿಂದ ಪ್ರತಿ ತಿಂಗಳ ಆ ಮಗುವಿನ ಪೋಷಣೆಗಾಗಿ ಐದು ರೂ.ಗಳಂತೆ ಪ್ರೌಢನಾಗುವವರೆಗೆ ಕೊಡಲಾಗುತ್ತಿತ್ತು. ಮುಂದೆ

ವೀರ ಬಾಲಕ ಗರಡೆ ಮನೆಯಲ್ಲಿ ಮಲ್ಲವಿದ್ಯೆ, ಮುಷ್ಟಿಯುದ್ಧ, ತರುವಾಯ ಉಪಯೋಗಿಸುವ ಜಟ್ಟಿಕಾಳಗ, ಹೀಗೆ ಅನೇಕ ಕಲೆಗಳಲ್ಲಿ ಪ್ರವೀಣನಾದಂತಹ ಯುವಕರನ್ನು ಅರಸನ ಸಮ್ಮುಖದಲ್ಲಿ ಒಂದೂಗೂಡಿಸಿ ಅವನಿಗೆ ಸಾಮೂಹಿಕವಾಗಿ ವಿವಾಹ ಮಾಡುವುದು ವಿವಾಹ ಮಾಡುವಾಗ ದಂಪತಿಗಳಿಗೆ ಶಸ್ತ್ರಾಸ್ತ್ರ ಮತ್ತು ಉಡುಗೊರೆ ಕೊಟ್ಟು ಅವರಿಂದ ಸಂಸ್ಥಾನಕ್ಕೆ ವಿಪತ್ತು ಬಂದಾಗ ಅಥವಾ ಅರಸನಿಂದ ಕರೆ ಬಂದಾಗ ಸುದ್ದಿ ತಲುಪಿದಾ ಶಸ್ತ್ರಾಸ್ತ್ರ ಸಮೇತರಾಗಿ ರಾಜ್ಯಧಾನಿಗೆ ಅಥವಾ ಗುರುತಿಸಿದ್ದ ಸ್ಥಳಕ್ಕೆ ಧಾವಿಸಿ ಬರುವುದು, ಗೌಪ್ಯ ಪ್ರತಿಜ್ಞೆಗಳನ್ನು, ರಾಜನ ಸಮ್ಮುಖದಲ್ಲಿ ಮಾಡಿಸಿ ಕಳಿಸುವುದು ರೂಢಿಯಲ್ಲಿತ್ತು. ಅಂತೆಯೇ ಸಗರನಾಡಿನ ಕಾಯ್ದಿಟ್ಟ ೧೨೦೦೦ ಸೈನಿಕರು ಗೌಪ್ಯ ಪ್ರತಿಜ್ಞೆ ಮಾಡಿದ ವೀರ ಯುವಕರು ಡಂಗುರನಗಾರಿ, ಶಬ್ದ ಕೇಳಿ ಒಟ್ಟುಗೂಡಿ ದಾಳಿ ಮಾಡಬೇಕಾದ ಇಲ್ಲವೆ ಭಾರತದ ಇತರೆ ರಾಜರು ದಂಡೇತ್ತಿಬರುವ ಸುದ್ದಿಕೇಳಿ ಯುದ್ದಕ್ಕೆ ಸಿದ್ಧರಾಗುತ್ತಿದ್ದರು ಸುರಪುರದ ದೊರೆ, ಮಹಾಮಂತ್ರಿ, ಇವರಿಂದ ಸೈನಿಕ ಸಮೂಹಕ್ಕೆ ಯುದ್ಧದಲ್ಲಿ ಶಿಸ್ತುಪಾಲನೆ, ಗುಪ್ತಗಾರಿಕೆ, ಅಧಿಕಾರಿಗಳ ಹೇಳಿಕೆಯನ್ನು ಪಾಲಿಸುವ ಮತ್ತು ಹನುಮದ್ವಜಕ್ಕೆ ಕೀರ್ತಿಯನ್ನು ಸಂಪಾದಿಸಿಕೊಂಡು ಬರುವ ವೀರ ಪ್ರತೀಕದ ಮಾತುಗಳನ್ನು ಹೇಳುತ್ತಿದ್ದರು. ಅರಸರು ಸ್ವತಃ ಸೈನಿಕ ಸಮೂಹಕ್ಕೆ, ಯುದ್ದಕ್ಕೆ, ಹೋಗುವ ಸಂಪ್ರದಾಯ ಇಟ್ಟುಕೊಂಡ ಕಾರಣಕ್ಕೆ ಇವರಿಗೆ ಜಯದ ಮೇಲೆ ಜಯಸಂಪಾದಿಸಿದ ಐತಿಹಾಸಿಕ ಘಟನೆಗಳು ನಮ್ಮ ಕಣ್ಣ ಮುಂದೆ ಇವೆ. ಈ ಸೈನ್ಯದಲ್ಲಿ ವೀರ ಬೇಡಸಮುದಾಯದವು ಕೈಗೆ ಸಿಕ್ಕ ವೈರಿಗಳನ್ನು ಕಾಲ ಮೇಲೆ ಕಾಲಿಟ್ಟು ಸೀಳುವ ತಲೆಬುರುಡೆಗಳನ್ನು ಹೊಡೆದು ತುಂಟಾಟ ಆಡುವ ಆಸೆ ಬಿಚ್ಚುಗತ್ತಿ ಏಟಿಗೆ ಎರಡು ತುಂಡು ಮಾಡಿ ಹಾಕುತ್ತಿದ್ದರೆಂದರೆ ಎಂತಹ ದೀರರು ಎಂಬುದು ತಿಳಿಯುತ್ತದೆ. ಪಲಾಯನ ಮಾಡುವ ಸೋಲೊಪ್ಪುವ ಅಥವಾ ರಾಜಿಮಾಡಿಕೊಳ್ಳುವುದನ್ನು ಇವರು ಎಂದು ಒಪ್ಪುತ್ತಿರಲಿಲ್ಲ.

ಒಂದು ಐತಿಹಾಸಿಕ ಉದಾಹರಣೆ ಎಂದರೆ ಪಾಂಡಿಚೇರಿ ಯುದ್ಧದಲ್ಲಿ ಸುರಪುರದವರು ಅಂದರೆ ಸಗರ ನಾಡಿನ ಬೇಡ ಸೈನಿಕರು ಏಕಾಂಗಿ ವೀರರಾಗಿ ಯುದ್ಧಮಾಡಿ ಕೇವಲ ಅಲ್ಪವಧಿಯಲ್ಲಿ ಆ ದುರ್ಗಮವಾದ ಕೋಟೆಯನ್ನು ಜಯಸಿದ್ದರು ಆದರೆ ಸಗರನಾಡಿನ ವೀರ ಬೇಡರು ಮತ್ತು ಇತರ ಸಮೂಹ ಸೈನಿಕರು ಪ್ರಾಣತ್ಯಾಗ ಮಾಡಿದ ವೀರ ಸೈನಿಕರ ಪ್ರತಿಫಲವೇ ಜಯವಾಗಿತ್ತು.

ರಣರಂಗದಲ್ಲಿ ಭಾಗವಹಿಸುವ ವೀರಸೈನಿಕರು ಶಕ್ತಿ ಸಾಹಸ ಮತ್ತು ಶೌರ್ಯದ ಪರೀಕ್ಷೆಯನ್ನು ಇಲ್ಲಿಯ 'ಶ್ರೀವೇಣುಗೋಪಾಲಸ್ವಾಮಿ' ಜಾತ್ರೆಯ ಪ್ರಸಂಗದ 'ಹಾಲುಹೊಕಳಿ' ರಣಗಂಭದ ದಿವಸ ದೇವಸ್ಥಾನದ ಕೆಳಗಿನ ಬಯಲು ಪ್ರದೇಶದಲ್ಲಿ ಸೈನಿಕರು ಇಲ್ಲಿಯ ಹೊರಗಿನ ತರುಣ ವೀರರಲ್ಲಿ 'ಜಟ್ಟಿಕಾಳಗ' ಮಲ್ಲಯುದ್ದ ಇತರ ಸಾಹಸದ ಪ್ರದರ್ಶನಗಳು ನಡೆದು ಜಯ ಪಡೆದವರಿಗೆ ಸೈನಿಕ ಪಡೆಯಲ್ಲಿ ಬಂಟ, ಮಾನ್ಯ ಎಂಬ ಗೌರವ ಹಾಗೂ ಸ್ವಲ್ಪ ಭೂಮಿ, ಇತರರಿಗೆ ಬೆಳ್ಳಿಯ ಖಡೆಯನ್ನು ಕೊಡುತ್ತಿದ್ದರು. ಹೀಗೆ ಬರಿ ಬೇಡ ಸಮುದಾಯದ ಪುರುಷರು ವೀರದೀರರಾಗಿದ್ದ ಮಾತ್ರವಲ್ಲ ಬೇಡ ಮಹಿಳೆಯರು ಸಹ ಸಂದರ್ಭ ಬಂದೂದಗಿದರೆ ಯುದ್ಧವನ್ನು ಮಾಡಲು ತಯಾರಿದ್ದರು ಅಲ್ಲದೆ ಮಹಿಳೆಯು ಮಹಿಳೆಯರಾಗಿ ಉಳಿಯದೇ

ತಮ್ಮ ಪತಿಯಂದಿರಿಗೆ ಸ್ಫೂರ್ತಿಯ ಸೆಲೆಯಾಗಿದ್ದರು. ಶತ್ರುಗಳನ್ನು ಎದುರಿಸಲು ದೇಶದ್ರೋಹಿಗಳನ್ನು ನಿರ್ಮೂಲನೇ ಮಾಡಲು ಪ್ರೋತ್ಸಾಹ ಸ್ಫೂರ್ತಿಯನ್ನು ನೀಡುತ್ತಿದ್ದರು. ಇಂತಹ ಮಹಿಳೆಯರಲ್ಲಿ ಒಬ್ಬರೆಂದರೆ ಉದಾ: ರಾಣಿ ಈಶ್ವರಮ್ಮಕೂಡ ಒಬ್ಬರು. ಇದು ಸ್ವತಂತ್ರ ಪೂರ್ವ ಬೇಡ ಸಮುದಾಯದ ಪರಿಚಯವಾದರೆ ಸ್ವಾತಂತ್ರ್ಯನಂತರದಲ್ಲಿ ಸಗರನಾಡಿನ ಬೇಡ ಸಮುದಾಯ ಅದೋಗತಿಗೆ ಬಂದು ತಲುಪಿತು. ಅಂದರೆ ಸುರಪುರ ಶಹಾಪುರ, ಜೇವರ್ಗಿ ತಾಲೂಕುಗಳಲ್ಲಿನ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿನ ಬೇಡ ಸಮುದಾಯದ ಜನರು ಎಲ್ಲಾ ರೀತಿಯಿಂದಲೂ ಹಿಂದುಳಿಯುತ್ತಾ ಬಂದರು.

ಶತಮಾನಗಳ ಇಂದಿನಿಂದಲೂ ಹಾಗೂ ಸ್ವಾತಂತ್ರ್ಯಪಡೆದಂದಿನಿಂದಲೂ ನಾಯಕ ಅಥವಾ ಬೇಡ ಜನಾಂಗದವರೆ ಶಾಸಕರಾಗಿ ಬಂದಿದ್ದಾರೆ. ಆದರೂ ಸಗರನಾಡಿನ ಬೇಡ ಸಮುದಾಯದವರು ಶೇ ೫೦ ರಷ್ಟು ಗುಡಿಸಲು, ಮುರುಕಲು ಮನೆ, ಮಳೆಗೆ ಸೊರುವ ಜಂತಿ ಮನೆಗಳಲ್ಲಿಯೇ ವಾಸಿಸುತ್ತಾ ಬಂದಿದ್ದಾರೆ. ಕೆಲವು ಗ್ರಾಮಗಳಲ್ಲಿ, ಓಣಿಗಳಲ್ಲಿ ತಿನ್ನಲು, ಉಡಲು, ಬಟ್ಟೆಗೂ ಗತಿಯಿಲ್ಲದೆ ನರಳುವ ಸ್ಥಿತಿಯಲ್ಲಿದ್ದಾರೆ. ಇಂತಹ ಸ್ಥಿತಿಯಲ್ಲಿರುವ ಜನರಿಗೆ ರಾಜಕೀಯ ನಾಯಕರ ಸಹಾಯ ಅಸ್ತವಿಲ್ಲ. ಉದಾ. ಸುರಪುರದ ಡೊಣ್ಣಿಗೇರಾದಲ್ಲಿ, ಇನ್ನೂ ಗುಡಿಸಲಿನಲ್ಲಿದ್ದಾರೆ. ಆಓಣಿಯ ಸುತ್ತಮುತ್ತ ಕಲುಷಿತ ಕೆಟ್ಟ ವಾತಾವರಣವಿದೆ. ಹಾಗೂ ಅದು ಕೊಳಚೆ ಪ್ರದೇಶದಿಂದ ಕೂಡಿದೆ. ಅಲ್ಲದೇ ಸರಿಯಾಗಿ ಅಲ್ಲಿ ವಿದ್ಯುತ್ತಿನ ಸೌಕರ್ಯವಿಲ್ಲ. ಅಲ್ಲಿನ ಮಕ್ಕಳು ಇನ್ನೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಹಣ್ಣು, ತರಕಾರಿ, ಮಾರಿ ಬಂದಂತಹ ಅಲ್ಪಸ್ವಲ್ಪ ಆದಾಯದಿಂದ ಜೀವನವನ್ನು ಸಾಗಿಸುತ್ತಿದ್ದಾರೆ. ಹಾಗೂ ಹುಣಸೆ ಮರಗಳನ್ನು ಗುತ್ತಿಗೆ ಹಿಡಿದು ದೂರದ ಹೈದ್ರಾಬಾದಿಗೆ ಹೋಗಿ ವ್ಯಾಪಾರ ಮಾಡಿಕೊಂಡು ಬಂದು ತಮ್ಮ ಉಪ-ಜೀವನವನ್ನು ಸಾಗಿಸುತ್ತಾರೆ. ಮತ್ತು ಅದೇ ಊರಿನ ಕಬಾಡಗೇರಿ ಓಣಿಯ ಕೆಲವು ಬೇಡ ಕುಟುಂಬಗಳ ಪರಿಸ್ಥಿತಿಯು ಅದೇ ತರಹ ಇದೆ. ಆದರೆ ಒಂದು ವಿಚಿತ್ರವೆಂದರೆ ಪಕ್ಕದ ಬಿಚ್ಚಗತ್ತಿ ಓಣಿಯಲ್ಲಿ ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ ಶೈಕ್ಷಣಿಕವಾಗಿ ಮುಂದುವರೆದ ಬೇಡ ಕುಟುಂಬಗಳಿವೆ. ಕಾರಣ ಅಲ್ಲಿ ಶಿಕ್ಷಿತರ ಸಮೂಹ ಹೆಚ್ಚಿಗೆ ಇದೆ. ಇದೇ ರೀತಿ ಮಲ್ಲಿಬಾಯಿ ಗ್ರಾಮದ ಪರಿಸ್ಥಿತಿಯು ಹೇಳತೀರದು, ಸುಮಾರು ವರ್ಷಗಳ ಹಿಂದೆ ಅಂದರೆ ೫-೬ ವರ್ಷಗಳ ಹಿಂದೆ ಆ ಗ್ರಾಮ ವಿದ್ಯುತ್‌ಶ್ಚಕ್ತಿಯನ್ನು ಕಂಡಿರಲಿಲ್ಲ. ಪ್ರಸ್ತುತವಾಗಿಯು ರಸ್ತೆಯ ವ್ಯವಸ್ಥೆ, ಸಾರಿಗೆ ವ್ಯವಸ್ಥೆಯು ಇಲ್ಲವಾಗಿದೆ.

ಬಾದ್ಯಪುರ ಲಿಂಗದಹಳ್ಳಿ, ಕಕ್ಕೆರಾ, ಬಂಡೊಳಿ, ಹೆಮನೂರ, ಲಕ್ಷ್ಮೀಪುರ, ದೀವಳಗುಡ್ಡ, ಸಿದ್ದಾಪುರ, ಹೆಮ್ಮಡಗಿ ಕರ್ನಾಳ, ಚಂದ್ಲಾಪುರ ಸತ್ಯಂಪೇಟ, ಸೂಗೂರ ಅದೇ ರೀತಿಯಾಗಿ ಶಹಾಪೂರ ತಾಲೂಕಿನ ಸಗರ, ಕೆಂಭಾವಿ, ವನದುರ್ಗ, ಕಕ್ಕಸಗೇರಾ, ಬುದನೂರ, ಕಾಡಮಗೇರಾ, ವಸಿಗೇರಾ ಜೇವರ್ಗಿ ತಾಲೂಕಿನ ನರಬೋಳಿ, ನೀಲಕೂಡ.

ಹೀಗೆ ವಿವಿಧ ಕಡೆಗಳಲ್ಲಿ ಬೇಡ ಸಮುದಾಯದವರು ಶೈಕ್ಷಣಿಕವಾಗಿ, ಆರ್ಥಿಕವಾಗಿ ಅತಿಯಾಗಿ ಹಿಂದುಳಿದಿದ್ದಾರೆ. ಬೇಡ ಸಮುದಾಯದವರು ವಾಸಿಸುವ ಕೊಳಕು ಗುಡಿಸಲು ನಿಲ್ಲಲು ಜಾಗವಿಲ್ಲದೆ

ಹಲವಾರು ರೋಗಗಳಿಗೆ ಬಲಿಯಾಗಿದ್ದಾರೆ. ಬಡತನದಲ್ಲಿರುವ ಬೇಡ ಮಹಿಳೆಯರು ಪುರುಷರು ದಿನವಿಡಿ ಕೂಲಿ ಕೆಲಸಕ್ಕೆ ಹೋಗಿ ಬಂದ ಹಣದಲ್ಲಿಯೇ ಸಂಸಾರ ನಡೆಸುತ್ತಿದ್ದಾರೆ. ಆ ಗುಡಿಸಲು ವಾಸಿಗಳಿಗೆ ಕೇಳಿದರಂ ರಾಜಕೀಯ ನಾಯಕರಿಗ ಮತ್ತು ಸರಕಾರಿ ಅಧಿಕಾರಿಗಳಿಗೆ ಬಾಯಿಗೆ ಬಂದಂತೆ ಬೈಯುತ್ತಾರೆ. ೬೦ ವರ್ಷಗಳಿಂದ ಬೇಡ ಸಮುದಾಯದ ವ್ಯಕ್ತಿಗಳೆ ಶಾಸಕರಾಗಿ ಲೋಕಸಭಾ ಸದಸ್ಯರಾಗಿ ಕೇಂದ್ರ ಮಂತ್ರಿಗಳಾಗಿ ರಾಜ್ಯ ಮಂತ್ರಿಗಳಾಗಿ ಜಿಲ್ಲಾ ಪಂಚಾಯತಿ ಅಧ್ಯಕ್ಷ ಉಪಾಧ್ಯಕ್ಷ ಪುರಸಭೆ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ತಮ್ಮ ಕುಟುಂಬದ ಅಭಿವೃದ್ಧಿಯನ್ನು ಮಾಡಿಕೊಂಡಿದ್ದಾರೆ. ವಿನಾಃ ನಮ್ಮ ಅಭಿವೃದ್ಧಿಗೆ ಗಮನ ಕೊಟ್ಟಿಲ್ಲ ನಮಗೆ ಈ ಗುಡಿಸಲೇ ಗತಿ. ಚುನಾವಣೆಯ ಸಾಮಯದಲ್ಲಿ ಮತ್ತು ಹೊಡೆದಾಟಕ್ಕೆ ಮಾತ್ರ ನಾವು ನೆನಪಾಗುತ್ತೇವೆ. ಹಾರಿಸಿ ಬಂದ ಮೇಲೆ ನಮಗೆ ನೀವು ಓಟು ಹಾಕಿಲ್ಲ ಎಂದು ಬೇಧಭಾವ ಮಾಡಿ ಗೊತ್ತಿಲ್ಲ ನಡೆಯಿರಿ ಎಂದು ಹೇಳುತ್ತಾರೆ. ಎಂದು ತಮ್ಮ ಗೋಳನ್ನು ತೊಡಿಕೊಂಡಿದ್ದಾರೆ. ಚಿಕ್ಕ ಪುಟ್ಟ ರಾಜಕೀಯ ವ್ಯಕ್ತಿಗಳು ಗುತ್ತಿಗೆದಾರರನ್ನು ಪುಡಿ ರೌಡಿಗಳನ್ನು ಶಾಸಕರು ನಂಬುತ್ತಾರೆ. ಸಾಮಾನ್ಯ ಮತದಾರರು ಹೋದರೆ ಅಲಕ್ಷ ಮಾಡುತ್ತಾರೆ. ಬೇಡ ಸಮುದಾಯದ ಜನರನ್ನು ಕುಡಿಸಿ, ತಿನ್ನಿಸಿ, ಕೇವಲ ಜಗಳಗಳನ್ನು ತೆಗೆದು ಹೊಡೆದಾಡುವುದಕ್ಕೆ ಮಾತ್ರ ಸೀಮಿತಗೊಳಿಸಿದ್ದಾರೆ. ನಾಯಕ ಜನಾಂಗದವರಿಗೆ ಹಲವಾರು ಅನ್ಯಾಯಗಳಾದಾಗ ತಮ್ಮ ಜಾತಿ ಸಂಘಟನೆಗಳಾದ ವಾಲ್ಮೀಕಿ ಸಂಘಗಳ ಹೋರಾಟದ ಮುಖಾಂತರ ನ್ಯಾಯ ದಕ್ಕಿಸಿಕೊಂಡಿದ್ದಾರೆ. ವಿನಾಹ ಸರಕಾರಿ ಅಧಿಕಾರಿಗಳಿಂದ ರಾಜಕೀಯ ನಾಯಕರಿಂದ ನ್ಯಾಯ ಸಿಕ್ಕಿಲ ಎಂದು ತಮ್ಮ ಅಳಲನ್ನು ತೊಡಿಕೊಳ್ಳುತ್ತಾರೆ.

ಉದಾ ದೇವಾಪುರ ಗ್ರಾಮದ ಯಮನಪ್ಪನ ಮರ್ಮಾಂಗಕ್ಕೆ ಪೋಲೀಸರು ಬೆಂಕಿ ಹಚ್ಚಿ ಸುಟ್ಟಾಗ ವಾಲ್ಮೀಕಿ ಅಥವಾ ಬೇಡ ಜಾತಿಯ ಸಂಘಟನೆಗಳು ಹೋರಾಟ ಮಾಡಿ ನ್ಯಾಯ ದೊರಕಿಸಿ ಕೊಟ್ಟಿದ್ದಾರೆ ಇಂತಹ ಅನೇಕ ಸಮಸ್ಯೆಗಳು ಬೇಡ ಸಮುದಾಯದ ಸಂಘಟನೆಗಳಿಂದ ಮಾತ್ರ ಬಗೆಹರಿದಿದೆ ವಿನಹ ಬೇರೆ ಯಾವ ರಾಜಕೀಯ ವ್ಯಕ್ತಿಗಳಿಂದಲೂ ನ್ಯಾಯ ಸಿಕ್ಕಿಲ್ಲವೆಂದು ಹೇಳಿದರೆ ತಪ್ಪಾಗಲಾರದು (ಪುಟ. ೧೪ ವಾಲ್ಮೀಕಿ ಕರ್ನಾಟಕ ೨೦೦೮)

ಕರ್ನಾಟಕ ರಾಜ್ಯದಲ್ಲಿ ಸುಮಾರು ೬೦ ಲಕ್ಷಗಳಷ್ಟು ಸಂಖ್ಯೆಯಲ್ಲಿ ಬೇಡ ಜನಾಂಗವು ಇರುವುದು ವಿಶೇಷವಾಗಿ ಸಗರನಾಡಿನಲ್ಲಿ ಅಂದರೆ ಸುರಪುರ, ಜೇವರ್ಗಿ, ಶಹಾಪುರ ಯಾದಗಿರಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಬೇಡ ಸಮುದಾಯದ ಪರಿಚಯ ಸ್ಥಿತಿಗತಿ ಸ್ಥಾನಮಾನ ಬದುಕಿನ ನಿರ್ವಹಣೆಯ ಮಾನದಂಡಗಳ ಮೂಲಕ ಹೇಳುವುದಾದರೆ ಈ ಜನಾಂಗದ ಜೀವನ ನಿರ್ವಾಹಣೆ ದುಸ್ತಿತಿಯಲ್ಲಿ ಸಾವಿರಾರು, ವರ್ಷಗಳ ಜನಾಂಗದ ಪರಂಪರೆಯು ಈ ಜನಾಂಗಕ್ಕಿದ್ದರು. ಮೂಲಭೂತ ಸೌಲಭ್ಯಗಳಿಂದ ತುಂಬಾ ವಂಚಿತವಾದ ಸಮುದಾಯವಾಗಿದೆ. ಆರ್ಥಿಕ ಹಾಗೂ ಶೈಕ್ಷಣಿಕವಾಗಿ ತೀರಾ ಹಿಂದುಳಿದ ಗ್ರಾಮೀಣ ಬದುಕಿನ ಈ ಸಮುದಾಯದ ಬಗೆಗಿರುವ ವಾಸ್ತವಿಕ ಸಮಸ್ಯೆಗಳು ಈ ದಿನಗಳಲ್ಲಿ ಚರ್ಚೆಗೊಳಪಡಿಸಿ ಪರಿಹಾರಗಳನ್ನು ಕೈಗೊಳ್ಳದೆ ಬಹುತೇಕ ಈ ಸಮುದಾಯದ ಬಗೆಗಿರುವ ಶೌರ್ಯ

ಸಾಹಸ ಪರಂಪರೆಗಳನ್ನು ಹೊಗಳುವುದರಲ್ಲಿಯೇ ಕಾಲಹರಣ ಮಾಡುತ್ತಿದ್ದಾರೆ. ಕಳೆದು ೬೦ ವರ್ಷಗಳಲ್ಲಿ ಮೀಸಲಾತಿ ಸೌಲಭ್ಯ ಪಡೆದದ್ದನ್ನು ಬಿಟ್ಟರೆ ಯಾವುದೇ ಪರಿಣಾಮಕಾರಿ ಬದಲಾವಣೆಗಳು ಈ ಸಮುದಾಯದ ಅಭಿವೃದ್ಧಿಯ ಹಿನ್ನೆಲೆಯಲ್ಲಿ ನಡೆದಿಲ್ಲ. ಕೆಲವು ಜನ ಬೇಡರಷ್ಟೆ ಎಲ್ಲಾ ರೀತಿಯ ಮೀಸಲಾತಿಯ ಸದುಪಯೋಗವನ್ನು ಪಡೆದು ಗಣ್ಯವ್ಯಕ್ತಿಗಳಾಗಿ ಮೆರೆಯುತ್ತಿದ್ದಾರೆ ವಿನಹ ಬಹುತೇಕ ಬೇಡ ಸಮುದಾಯದವರು ವಂಚಿತರಾಗಿದ್ದಾರೆ. ಈ ಹಿಂದೆ ಅಂದರೆ ಸಗರನಾಡಿನ ಬೇಡ ಸಮುದಾಯದವರು ಸ್ವಲ್ಪ ಮಟ್ಟಿಗೆ ಎಲ್ಲಾ ರೀತಿಯ ಮೂಲಭೂತ ಸೌಕರ್ಯಗಳನ್ನು ಹೊಂದಿದವರಾಗಿದ್ದಾರೆ. ಅಲ್ಲದೇ ಹೆಚ್ಚಿನ ಕೃಷಿ ಭೂಮಿಯನ್ನು ಹೊಂದಿದ್ದಾರೆ.

ಉದಾ: ೪೦ ರಿಂದ ಸುಮಾರು ೩೦೦೦ ಎಕರೆಯವರೆಗೆ ಹೋಲಗದ್ದೆಗಳನ್ನು ಹೊಂದಿ ಉತ್ತಮ ಜೀವನವನ್ನು ನಡೆಸುತ್ತಿದ್ದರು. ಆದರೆ ಅದೇ ಸಂದರ್ಭದಲ್ಲಿ 'ಜಮೀನುದಾರಿ ಪದ್ಧತಿ ನಿರ್ಮೂಲನಾ ಶಾಸನ'ದಿಂದ ಬೇಡ ಸಮುದಾಯದವರು ತಮ್ಮ ಭೂಮಿಗಳ್ನು ಕಳೆದುಕೊಂಡು ನಿರ್ಗತಿಕರಾದರು. ಅಲ್ಪಸ್ವಲ್ಪ ಉಳಿದ ಭೂಮಿಯನ್ನು ಬೇಡ ಸಮುದಾಯದ ಪುರುಷರು ದುಶ್ಚಟಗಳಿಗೆ ಬಲಿಯಾಗಿ ಹಾಳು ಮಾಡಿಕೊಂಡರು ಜನಪರ ಕಾಳಜಿ ಇಲ್ಲದ ಸರಕಾರಗಳು ತೆಗೆದುಕೊಳ್ಳುವ ನೀತಿ ನಿಯಮಳಿಂದ ಹಾಗೂ ಕಾರ್ಯ ಯೋಜನೆಗಳಿಂದ ಯಾವ ಆಶಾದಾಯಕ ಸವಲತ್ತುಗಳು ಪರಿಹಾರಗಳು ತಕ್ಷಣವೇ ಸಿಗಲಿಲ್ಲವಾದ್ದರಿಂದ ಇಲ್ಲಿಯ ಜನರು ಆರ್ಥಿಕವಾಗಿ ಹಿಂದೆ ಉಳಿಯುತ್ತಾ ಬಂದರು.

ಪ್ರಸ್ತುತ ಸಮಾಜದಲ್ಲಿ ಬೇಡ ಜನಾಂಗವು ಅಸ್ಪೃಶ್ಯತೆಯ ಸೊಂಕಿನಿಂದ ಸ್ವಲ್ಪ ಮಟ್ಟಿಗೆ ದೂರವಿದ್ದರು. ಈ ವರ್ಗ ಶೋಷಣೆಯಿಂದ ಮುಕ್ತವಾಗಿಲ್ಲ. ಆದರೂ ಇಂತಹ ಗಂಭೀರ ಸಮಸ್ಯೆಗಳನ್ನು ಮರೆತು ತಮ್ಮ ಬಹುಸಂಖ್ಯಾತ ಸಮುದಾಯಗಳಲ್ಲಿ ಶೂದ್ರ ಕಲ್ಪನೆಗಳು ಮಾಯವಾಗಿ ದಬ್ಬಾಳಿಕೆ ಕುಕೃತ್ಯಗಳು ಮೊಳಕೆಯೊಡೆಯುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗುತ್ತಿರುವುದು ಒಂದು ಸಮಸ್ಯೆಯಾಗಿದೆ. ಬೇಡ ಸಮುದಾಯದವರು ಪಟ್ಟಭದ್ರ ಹಾಗೂ ಮೂಲಭೂತವಾದಿಗಳಿಂದ ತಿರಸ್ಕೃತಗೊಂಡವರಾಗಿದ್ದನ್ನು ಮರೆತು ಕೆಲವು ಸಾಮಾಜ ಕಂಟಕರ ಮಾತಗಳನ್ನು ಕೇಳಿ ತಮ್ಮದೇ ಸಹೋದರ ಸಮುದಾಯಗಳ ಜೊತೆಗೆ ಅಪ್ರಜ್ಞಾ ಪೂರ್ವಕವಾಗಿ ಗಲಾಟೆಗಳಲ್ಲಿ ತೊಡಗಿರುವುದು ವಿಪರ್ಯಾಸ. ಇಷ್ಟೆಲ್ಲಾ ಸಗರನಾಡಿನ ಬೇಡ ಸಮುದಾಯದ ಅಮೋಘ ಇತಿಹಾಸ ಮತ್ತು ಅವರ ಜೀವನ ಹಾಗೂ ನಡೆದು ಬಂದ ದಾರಿಯನ್ನು ನೋಡಿದಾಗ ಸುಖ ದುಃಖಗಳನ್ನು ಸಮಾನವಾಗಿ ಪಡೆಯುತ್ತಲೇ ಬಂದಿದ್ದಾರೆ. ಬೇಡರಲ್ಲಿ ಇರುವಂತಹ ಸಮಸ್ಯೆಗಳು ಪ್ರಸ್ತುತ ದಿನ ಮಾನಗಳಲ್ಲಿ ಅಂದರೆ ಹತ್ತು ವರ್ಷಗಳಿಂದ ಇತ್ತೀಚಿನವರೆಗೆ ತೀವ್ರಗತಿಯಲ್ಲಿ ನಿವಾರಣೆಯಾಗುತ್ತಿವೆ. ಅದಕ್ಕೆ ಕಾರಣ ಬೇಡ ಸಮುದಾಯದವರಲ್ಲಿ ಸಂಘಟನೆಯ ಪ್ರಜ್ಞೆ ಮೂಡತೊಡಗಿದೆ. ತಮ್ಮ ಮಕ್ಕಳನ್ನು ಶಾಲಾ ಕಾಲೇಜು ವಿಶ್ವವಿದ್ಯಾಲಯ ಮಟ್ಟಕ್ಕೂ ಕಳುಹಿಸಕೊಟ್ಟು ಶಿಕ್ಷಣವನ್ನು ಕೊಡುತ್ತಿದ್ದಾರೆ ಹಾಗೂ ಸರಕಾರ ಮೀಸಲಾತಿ ಸೌಲಭ್ಯವನ್ನು ಸರಿಯಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಬಹುಮುಖ್ಯವಾಗಿ ರಾಜಕೀಯ ರಂಗದಲ್ಲಿ ಇವರು ಸಗರ ನಾಡಿನಾದ್ಯಂತ ಪ್ರಭಾವವನ್ನು ಬೀರಿದ್ದಾರೆ ರಾಜಕೀಯಕ್ಕೆ ಇವರ ವ್ಯಕ್ತಿತ್ವ ಹೇಳಿ

ಮಾಡಿಸಿದಂತಿದೆ ಎಂದು ಹೇಳಿದರೆ ತಪ್ಪಾಗಲಾರದು. ಇತ್ತೀಚಿನ ದಿನಮಾನಗಳಲ್ಲಿ ಬೇಡ ಜಾತಿಗೆ ದಕ್ಕೆ ಬಂದಾಗ ಕಳಂಕ ಬಂದಾಗ ಯಾವುದೇ ಬೇದ ಭಾವ ಮಾಡದೆ ವೈಯಕ್ತಿಕ ದ್ವೇಶವನ್ನು ಬಿಟ್ಟು ಒಂದುಗೂಡಿ ಪ್ರತಿಭಟನೆ ಮಾಡುತ್ತಿದ್ದಾರೆ. ಸಗರನಾಡಿನಲ್ಲಿ ಬೇಡರ ಸಮುದಾಯ ಐಕ್ಯತೆಯಿಂದಿದೆ. ಈ ಸಮುದಾಯದವರು ಬೇರೆ ಯಾವ ಜಾತಿಯನ್ನು ದ್ವೇಶಿಸುವುದಿಲ್ಲ ಇವರು ಜಾತಿಗೆ ಮಾತ್ರ ನಾಯಕರಲ್ಲ ಇಡೀ ದೇಶಕ್ಕೆ, ಸಗರ ನಾಡಿಗೆ ನಾಯಕರು ಎಂದು ಹೇಳಿದರೆ ತಪ್ಪಾಗಲಾರದು.

**ಸಗರನಾಡಿನ ಬೇಡ ಸಮುದಾಯದ ಸಂಸ್ಕೃತಿ**

ಸಗರನಾಡಿನ ಬೇಡ ಸಮುದಾಯದ ಸಂಸ್ಕೃತಿ ವಿಶೇಷವಾದುದು. ಸಮುದಾಯಗಳ ಸಂಸ್ಕೃತಿಗಿಂತ ಬೇಡ ಜನಾಂಗದ ಸಂಸ್ಕೃತಿ ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ ಬೇಡರಲ್ಲಿ ಸಾಮಾನ್ಯವಾಗಿ ಕಂಡುಬರುವ ಸಾಂಸ್ಕೃತಿಕ ಲಕ್ಷಣಗಳನ್ನು ಸಗರನಾಡು ದರ್ಶನ, ಮರೆತು ಹೋದ ಸುರಪುರ ಇತಿಹಾಸ ಎಂಬ ಗ್ರಂಥಗಳಿಂದ ತಿಳಿದುಕೊಳ್ಳುವುದರ ಜೊತೆಗೆ ಆ ಜನಾಂಗ ಬಗ್ಗೆ ಸಂಶೋಧನೆ ಮಾಡಿ ಅರಿತುಕೊಳ್ಳಲಾಗಿದೆ. ಸಗರನಾಡಿನಲ್ಲಿ ನೆಲೆಸಿರುವ ಬೇಡರ ಶಾರೀರಿಕ ಲಕ್ಷಣಗಳು ಇತರ ಸಮುದಾಯಗಳ ಜನರಿಗಿಂತ ತೀರಭಿನ್ನವಾಗಿವೆ. ಎತ್ತರ ಮತ್ತು ಬಲವಾದ ದೈಹಿಕ ಲಕ್ಷಣಗಳನ್ನು ಹೊಂದಿರುವ ಇವರು ಗತ್ತುಗೌರತ್ತಿನ ನಡೆತೆಯನ್ನು ಹೊಂದಿದ್ದಾರೆ. ಮೊದಲು ಉಡುಗೆ ತೊಡುಗೆಯಲ್ಲಿ ತೀರ ನಿರ್ಲಕ್ಷತೆಯನ್ನು ಹೊಂದಿದ್ದಾರೆ. ಆದರೆ ಇತೀಚಿನ ದಿನಮಾನಗಳಲ್ಲಿ ಆಧುನೀಕರಣದ ಪ್ರಭಾವದಿಂದ ಒಳ್ಳೆಯ ಉಡುಪುಗಳನ್ನು ಧರಿಸುತ್ತಿದ್ದಾರೆ.

ವಿವಾಹ ಇತರ ಕುಲಚಾರಕ್ಕೆ ತಕ್ಕಂತೆ ಗೋತ್ರ ಮತ್ತು ಬೆಡಗುಗಳು ಹುಟ್ಟಿಕೊಂಡವು. ಎಷ್ಟೋ ಕೃತಿಗಳಲ್ಲಿ ಬೇಡರ ಕೆಲವು ಗೋತ್ರಗಳನ್ನು ದಾಖಲೆಯಾಗಿದೆ. ಅವುಗಳೆಂದರೆ ಗುಜ್ಜಲರು, ಗೋಸಲರು, ಮುಮ್ಮಡ್ಲರು, ಮಿನುಗಲರು ಭಾಜ್ಮಂಡಲ್ಕರು ಇವು ಇವರ ಬೆಡಗುಗಳಾದರೆ ಒಂದೇ ಬೆಡಗಿಗೆ ಸೇರಿದವರನ್ನು ಸಹೋದರರು ಎಂದು ಭಾವಿಸುತ್ತಾರೆ. ಬೇಡರು ಬೇಟೆ, ಪಶುಪಾಲನೆ, ಕೃಷಿಯಲ್ಲದೆ ದೊರೆ ರಾಜ ಅರಸ ತಳವಾರ ವಾಲೀಕಾರ, ಸುಬೇದಾರ, ಸಿಪಾಯಿ, ದೇಸಾಯಿ, ಜಾಹಗೀರುದಾರರು, ಕಟ್ಟಿಮನಿ ಮೊದಲಾದ ಹೆಸರುಗಳಿಂದ ಕರಿಸಿಕೊಂಡ ರಾಜ ಶ್ರೇಷ್ಟಿಗಳಾಗಿದ್ದರು.

**ಬೇಡರ ವಿವಾಹ ಪದ್ಧತಿ (ಪತ್ರಿಕೆ ವಾಲ್ಮೀಕಿ ಕರ್ನಾಟಕ ೨೦೦೧)**

ಬೇಡರಲ್ಲಿ ವಿವಾಹ ಪದ್ಧತಿ ವಿಶೇಷವಾಗಿ ಆಚರಣೆಯಲ್ಲಿದೆ ವಿವಾಹವನ್ನು ಅವರು ಪವಿತ್ರ ಬಂಧನ ಜನ್ಮ-ಜನ್ಮಾಂತರಗಳ ಸಂಬಂಧ ಎಂದು ಭಾವಿಸುತ್ತಾರೆ. ಬೇಡರಲ್ಲಿ ಚಿಕ್ಕವಯಸ್ಸಿಗೆ ಮದುವೆ ಮಾಡುವ ಪದ್ಧತಿ ಇನ್ನು ಪ್ರಚಲಿತದಲ್ಲಿವೆ. ಹೆಣ್ಣು ಋತುಮತಿಯಾದ ಕೂಡಲೇ ಮದುವೆ ಮಾಡಿ ಬಿಡುತ್ತಾರೆ. ಬಹುಪತ್ನಿತ್ವ ಬೇಡರ ಕೆಲವು ಜನರಲ್ಲಿ ಇನ್ನೂ ರೂಢಿಯಲ್ಲಿದೆ. ಬೇಡರ ಮದುವೆ ಮಹೋತ್ಸವ ಆಚರಣೆಯಲ್ಲಿ ವೈವಿಧ್ಯತೆ ಇದೆ. ಔತಣಕೂಟಗಳು ಮದುವಿಗೆ ಪೆಂಡಲ್ ಕಟ್ಟಿ ,ಐದು ಕಂಬಗಳನ್ನು ನಿಲ್ಲಿಸಿ

ಅಂಗಳದಲ್ಲಿ ತೆಂಗಿನಗರಿಗಳ ಮೂಲಕ ಹಂದರವ ಹಾಕಿ. ಅರಿಶಿಣವನ್ನು ಹಚ್ಚಿ ಮದುವೆಗಿಂತ ಮೊದಲದಿನ ವಧು-ವರರ ಸ್ವಗೃಹದಲ್ಲಿ ತಮ್ಮ ಸಂಬಂಧಿಕರು, ಬಂಧು ಬಳಗದವರು ಮದು ಮಗ, ಮಧುವಣಗಿತ್ತಿ ಮಾಡಿಕೊಂಡು ಎರಡೂ ಕಡೆಯವರು ವಿವಾಹ (ಮಂಟಪಕ್ಕೆ) ಸ್ಥಳಕ್ಕೆ ಬಂದು ಸೇರುತ್ತಾರೆ. ಅಂದು ರಾತ್ರಿ ವಿಳ್ಯೆಯ ಹಂಚುವ ಸಂಪ್ರದಾಯ, ವಧುವಿನ ಕಡೆಯವರಿಗೆ ಅಕ್ಕಿ (ಇಪ್ಪತ್ತೈದೋ-ಐವತ್ತೈದೋ) ಸೇರು ಕೂಡುವ ಸಂಪ್ರದಾಯ ಮುಗಿಸಿದ ನಂತರ ಎಲ್ಲರೂ ಸೇರಿ ಊಟ ಮಾಡಿ ಮಲಗುವರು, ವಿವಾಹದಿನ ಬೆಳಿಗ್ಗೆ ನಾಲ್ಕುಮಣ್ಣಿನ ಕೊಡಿಕೆಗಳಲ್ಲಿ ನೀರು ತುಂಬಿ, ಚೌಕಾಕಾರದ ಸ್ಥಳದಲ್ಲಿ ಇಟ್ಟು ವಧು-ವರರಿಗೆ ಸ್ನಾನಮಾಡಿಸುತ್ತಾರೆ. ಮದುಮಗ ಹತ್ತಿ ಬಟ್ಟೆತೊಡುತ್ತಾನೆ. ಮಧುಮಗಳು ಶ್ವೇತವರ್ಣದ ಸೀರೆ ಧರಿಸಿರುತ್ತಾಳೆ. ಆರುತಿ ತಟ್ಟೆಗಳನ್ನು ಪಕ್ಕದಲ್ಲಿ ವರನ ಅಕ್ಕ ಅಥವಾ ತಂಗಿಯರು ಹಿಡಿದಿರುತ್ತಾರೆ. ಹೊಸ ಬಟ್ಟೆ ಧರಿಸಿದ ನಂತರ ವರನ ತಲೆಗೂದಲು ಬಾಚಿ ಹಣೆಗೆ ಬಾಸಿಂಗ ಕಟ್ಟಿ ಮದುಮಗ ಮದುಮಗಳು ಮದುವೆ ಮಂಟಪಕ್ಕೆ ಹೋಗಿ ಕುಳಿತುಕೊಳ್ಳುತ್ತಾರೆ. ಬ್ರಾಹ್ಮಣ ಗುರುಗಳಿಂದ ಮಂತ್ರ ಹೇಳಿಸಿ ಅವರಿಂದ ಆಶೀರ್ವಾದ ಪಡೆದು ಮಂತ್ರ ಅಕ್ಕಿ ಕಾಳುಗಳನ್ನು ಇಬ್ಬರು ತಲೆಯ ಮೇಲೆ ಹಾಕಿಸಿ ಕೊಳ್ಳುತ್ತಾರೆ. ನಂತರ ಮಾಂಗಲ್ಯ ಸೂತ್ರವನ್ನು ವರನು ಕಟ್ಟುತ್ತಾನೆ. ಮದುವೆಯಾದ ಐದು ದಿನಕ್ಕೆ ಹಂದರವನ್ನು ತೆಗೆದು ಹೋಳಿಗೆ ಮಾಡಿ ಸಿಹಿ ಊಟ ಆದ ಮೇಲೆ ಕುರಿ ಅಥವಾ ಮೇಕೆಯನ್ನು ಕುಯ್ದು ಮಾಂಸದೂಟವನ್ನು ಮಾಡಿಸುತ್ತಾರೆ. ಇದಕ್ಕೆ ಅಂದರಬ್ಯಾಟಿ ಎಂದು ಕರೆಯುತ್ತಾರೆ.

ಸಗರನಾಡಿನಲ್ಲಿ ಗೌರವಾನ್ವಿತ ಬೇಡರ ಕುಟುಂಬಗಳನ್ನು ಬಿಟ್ಟರೆ ಇತರ ಬೇಡ ವಿಧವೆಯರು ಪುನಃ ಮದುವೆಯಾಗುವ ಉದಾಹರಣೆಗಳಂದು ಗಂಡನ ಅಣ್ಣತಮ್ಮಂದಿರನ್ನು ತನ್ನ ಬೆಡಗಿನವರನ್ನು ಮದುವೆಯಾಗುವುದು ನಿಷಿದ್ದ.

**ವಿವಾಹ ವಿಚ್ಛೇದನ ಪದ್ಧತಿ**

ಬೇಡರ ಸಮುದಾಯದಲ್ಲಿ ವಿವಾಹ ವಿಚ್ಛೇದನವು ಹಿಂದಿನಿಂದಲು ಜಾರಿಯಲ್ಲಿದೆ ಬೇಡರ ನ್ಯಾಯ ಪಂಚಾಯತಿಯಲ್ಲಿ ಅಥವಾ ದರಬಾರ (ಅರಮನೆ)ದಲ್ಲಿ ತೀರ್ಮಾನವಾಗುತ್ತಿದ್ದವು ಈಗಲು ಸಹ ಇದು ರೂಢಿಯಲ್ಲಿದೆ. ಒಂದು ವೇಳೆ ತೀರ್ಮಾನವಾಗದೆ ಇದ್ದಾಗ ಪ್ರಕರಣವನ್ನು ನ್ಯಾಯಾಲಯದ ಮೂಲಕ ಇತ್ಯಾರ್ಥ ಪಡಿಸಿಕೊಳ್ಳುತ್ತಾರೆ. ಅರಮನೆಯ ದೊರೆಗಳ ನಿಯಮಗಳ ಪಾಲನೆ ಬಹುಮುಖ್ಯವಾಗುತ್ತದೆ. ಈ ಹಿಂದೆ ಹೆಂಡತಿ ಹಾದರ ಮಾಡಿದರೆ ಕಠಿಣ ಶಿಕ್ಷೆ ವಿಧಿಸುತ್ತಿದ್ದರು. ಗಂಡನು ಹೆಂಡತಿಗೆ ಕಿರುಕುಳ ಕೊಟ್ಟರೂ ಸಹ ಕಠಿಣ ಶಿಕ್ಷೆಯಾಗುತ್ತದೆ. ಇಬ್ಬರಿಂದ ಅಂಗೀಕೃತವಾದಾಗ ವಿವಾಹ ವಿಚ್ಛೇಧನವಾಗಿ ದೂರವಾಗುತ್ತಾರೆ. ವಿಚ್ಛೇದನ ಕೊಡುವ ಮಹಿಳೆಯ ಗಂಡನಿಂದ ಒಪ್ಪಿಗೆ ಪತ್ರ ತೆಗೆದುಕೊಂಡ ನಂತರ

ವಿಚ್ಛೇದನ ಕೊಡುತ್ತಾಳೆ. ಆಕಸ್ಮಾತ ತಪ್ಪಾಗಿ ಕೆಳಜಾತಿಯವನನ್ನು ಮದುವೆಯಾದರೆ ಅವಳನ್ನು ಬೇಡ ಸಮುದಾಯದವರು ಜಾತಿಯಿಂದ ಹೊರಹಾಕುತ್ತಾರೆ ಒಂದುವೇಳೆ ಪುರುಷನು ಬೇರೆ ಜಾತಿಯವಳನ್ನು ಮದುವೆಯಾದರೆ ವಿಧಿವಿಧಾನಗಳ ಮೂಲಕ ಅವಳನ್ನು ತಮ್ಮ ಕುಲಕ್ಕೆ ಸೆರಿಸಿಕೊಳ್ಳುತ್ತಾರೆ.

ಇದು ವಿವಾಹಕ್ಕೆ ಸಂಬಂಧಪಟ್ಟ ಸಂಸ್ಕೃತಿಯಾದರೆ ಇನ್ನು ಆಸ್ತಿ. ಪಿತ್ರಾರ್ಜಿತ ಆಸ್ತಿಯು ಯಾರ್ಯಾರಿಗೆ ಸೇರಬೇಕೆಂಬ ನಿಯಮಗಳಿವೆ. ಹಿಂದೂ ಕಾನುನೂನಿನ್ವಯ ಬೇಡರು, ಪಿತ್ರಾರ್ಜಿತ ಗೌರವ, ಅಧಿಕಾರ, ಸಂಪತ್ತು, ಸ್ವತ್ತನ್ನು ಎಲ್ಲವನ್ನು ಪಡೆಯುತ್ತಾರೆ. ಆಸ್ತಿಯನ್ನು ಸಮಾನಾಗಿ ಮಕ್ಕಳು ಹಂಚಿಕೊಳ್ಳುತ್ತಾರೆ. ಅಣ್ಣ ತಮ್ಮಂದಿರು ಸತ್ತರೆ ಅವರ ಸಂಬಂಧಿಗಳಿಗೆ ಪಾಲು ಹೋಗುತ್ತದೆ. ಇಂದು ಪಿತ್ರಾರ್ಜಿತ ಸ್ವತ್ತನ್ನು ಹೆಚ್ಚಾಗಿ ಮೊಮ್ಮಕ್ಕಳು ಪಡೆಯುತ್ತಾರೆ. ಅಧಿಕಾರ ಗೌರವಗಳು ತಪ್ಪದೇ ಮುಂದಿನ ತಲೆಮಾರಿಗೆ ಹೋಗುತ್ತದೆ. ಕೆಲವೊಮ್ಮೆ ಸ್ಪರ್ಧೆಗಳು ಏರ್ಪಟ್ಟರು ಹೆಚ್ಚಾಗಿ ಪುರುಷರಿಗೆ ಅವಕಾಶ ಕಲ್ಪಿಸಿದ್ದರು. ಮಹಿಳೆಗೂ ಅನ್ಯಾಯವಾಗದಂತೆ ನೋಡಿಕೊಳ್ಳುತ್ತಾರೆ.

**ಧಾರ್ಮಿಕ ಆಚರಣೆಗಳು**

ಸಗರನಾಡಿನ ಬೇಡಸಮುದಾಯದವರು ಸನಾತನ ಧರ್ಮವಾದ ಹಿಂದೂ ಧರ್ಮದ ಅವಲಂಭಿಗಳು. ವರ್ಣ ವ್ಯವಸ್ಥೆಯಲ್ಲಿ ಇವರು ಕ್ಷತ್ರಿಯ ವರ್ಣದ ಸ್ಥಾನಮಾನವನ್ನು ಹೊಂದಿದ್ದಾರೆ. ಅಲ್ಲದೆ ವೀರರು ಶೂರರು ಮಹಾನ್ ದೇಶಾಭಿಮಾನಿಗಳು ಕೂಡ ಧರ್ಮಕ್ಕಾಗಿ ಬೇಡರು ತಮ್ಮ ಪ್ರಾಣವನ್ನು ತ್ಯಾಗಮಾಡಲು ಸಿದ್ಧರಾಗುತ್ತಾರೆ. ಮಹಾನ್ ದೈವಿ ಭಕ್ತರು ಕೂಡ, ಹಿಂದೂ ಧರ್ಮದ ರಕ್ಷಣೆಯಲ್ಲಿ ಇವರದು ಸಿಂಹಪಾಲು, ಎಂದು ಹೇಳಿದರೆ ತಪ್ಪಾಗಲಾರದು. ಇವರಲ್ಲಿ ಶೈವ ಮತ್ತು ವೈಷ್ಣವ ಪಂಥಗಳಿವೆ. ಗಮನಿಸಬೇಕಾದ ಸಂಗತಿ. ಏನೆಂದರೆ ಸಗರನಾಡಿನ ಬೇಡರು ಮತ್ತು ಬೇಡ ರಾಜರುಗಳು ವೈಷ್ಣವ ಶೈವ ಪಂಥಗಳನ್ನು ಸಮಾನವಾಗಿ ಅಪ್ಪಿಕೊಂಡಿದ್ದಾರೆ. ಸಗರನಾಡಿನ ಬೇಡರು ಹೆಚ್ಚಾಗಿ ವಿಷ್ಣುವಿನ ಆರಾಧಕರಾಗಿದ್ದು ಇವರು ಹೆಚ್ಚಾಗಿ ಶ್ರೀರಾಮ, ತಿರುಪತಿ, ತಿಮ್ಮಪ್ಪ ಆಂಜನೇಯ ಸ್ವಾಮಿಯ ಆರಾಧಕರಾಗಿದ್ದಾರೆ. ಮತ್ತು ಶ್ರೀ ವೇಣುಗೋಪಾಲಸ್ವಾಮಿ ಇವರ ಆರಾಧ್ಯ ದೈವವಾದ್ದರಿಂದ ಪ್ರತಿಯೊಂದು ಕಾರ್ಯದಲ್ಲಿ ನೆನಪಿಸಿಕೊಳ್ಳುತ್ತಾರೆ.

ಸೋಮವಾರ ಬೇಡರಿಗೆ ಬೇಸಾಯದ ರಜೆದಿನವಾಗಿರುತ್ತದೆ. ಎಲ್ಲಾ ಕೆಲಸಗಳಿಂದಲೂ ದೂರವಿರುತ್ತಾರೆ. ಮನೆದೇವರಿಗೆ ಸಂಪ್ರದಾಯಬದ್ಧವಾಗಿ ಗೌರವದಿಂದ ನಡೆದುಕೊಳ್ಳುತ್ತಾರೆ. ರೈತರು ಕೂಲಿಕಾರರು ಕಾರ್ಮಿಕರು ಎತ್ತಗಳನ್ನು ಪೂಜಿಸುತ್ತಾರೆ ಬಸವಿ ಬೇಡರಿಗೆ ಶ್ರೀಕೃಷ್ಣ ಅಚ್ಚುಮೆಚ್ಚಿನ ದೈವ ಆದರೂ ಸಗರನಾಡಿನಲ್ಲಿ ಎಲ್ಲಮ್ಮ (ರೇಣುಕ) ದೇವಿ ಮತ್ತು ಹನುಮಾನ ದೇವರುಗಳನ್ನು ಪೂಜಿಸುತ್ತಾರೆ. ಇತ್ತೀಚಿನ ಪ್ರಸ್ತುತ ದಿನಮಾನಗಳಲ್ಲಿ ಬಸವಿ ಬೇಡರು ಬಸವಿತನವನ್ನು ಬಿಟ್ಟು ಉನ್ನತ ಸಂಸ್ಕೃತಿಯನ್ನು ರೂಪಿಸಿಕೊಳ್ಳುತ್ತಿದ್ದಾರೆ. ತಮ್ಮ ಮುದ್ದಿನ ಮಕ್ಕಳ ಹುಟ್ಟುಹಬ್ಬದಂದು ಸಿಹಿಪದಾರ್ಥಗಳನ್ನು ಮಾಡಿ ಎಲ್ಲರಿಗೂ ಹಂಚುತ್ತಾರೆ.

ಶಿಶುವಿಗೆ ಜನ್ಮಕೊಟ್ಟ ಮೂರು ದಿನ, ಇಪ್ಪತ್ತು ದಿನ, ಮೂರು ತಿಂಗಳದಂದು, ತೊಟ್ಟಿಲ ಕಾರ್ಯಕ್ರಮ ಮಾಡುತ್ತಾರೆ. ಸೂಲಗಿತ್ತಿಯರಿಗೆ ಮನೆದೇವರಿಗೆ ದವಸಧಾನ್ಯ ಕೊಡುವುದು ಸಹಜವಾದದ್ದು. ಹೆಸರಿಡುವಾಗ ಗುಗ್ಗರಿಹಾಕಿ ಎಲ್ಲರಿಗೂ ಹಂಚುತ್ತಾರೆ. ಗಂಡು ಮಗುವಾದರೆ ಅವರ ಸಮುದಾಯದಲ್ಲಿ ಎಲ್ಲಿಲ್ಲದ ಸಂತೋಷವಾಗುತ್ತದೆ. ಕಾರಣ ವಂಶೋದ್ಧಾರಕ ಹುಟ್ಟಿದ್ದಾನೆ ಎಂಬ ವಿಶೇಷ ಕಾಳಜಿ ಅವರಲ್ಲಿರುತ್ತದೆ. ಗಂಡು ಮಗುವಿಗೆಕೊಟ್ಟಂತ ವಿಶೇಷಗಮನ ಹೆಣ್ಣು ಮಗುವಿಗೆ ಕೊಡುವುದಿಲ್ಲ. ಇವರಲ್ಲಿ ಸ್ವಲ್ಪ ಲಿಂಗತಾರತಮ್ಯವಿದೆ. ಮರಣಹೊಂದಿದ ವ್ಯಕ್ತಿಯ 'ಶವ' ಸಂಸ್ಕಾರವು ನಿಯಮಬದ್ಧವಾಗಿ ನಡೆಯುತ್ತದೆ. ಸಗರನಾಡಿನಲ್ಲಿ ಬೇಡರ ಶವಗಳನ್ನು ಕಾದಿ (ಹಾಸಿಕೊಳ್ಳುವ ಜಮಖಾನಿ)ಯ ಮೂಲಕ ಮತ್ತು ಬಿದರಿನಿಂದ ತಯಾರಾದ ಸದಗಿಯ ಮೂಲಕ ಹಾಗೂ ಮಂಟಪದ ಮೂಲಕ ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಹೂಳುತ್ತಾರೆ ಇನ್ನು ಕೆಲವು ಬೇಡರು ತಮ್ಮ ಬೆಡಗಿನ ಪದ್ದತಿಯ ಪ್ರಕಾರ ಸುಡುತ್ತಾರೆ. ಮದುವೆಯಾಗದವರನ್ನು ಬೊರಲುಹಾಕಿ ಹೂಳುತ್ತಾರೆ. ಅಂಥವರಿಗೆ ದಿವಸ (ವೈಕುಂಠ ಅಥವಾ ಶಿವಗಣರಾಧನೆ ಮಾಡುವದಿಲ್ಲ) ಮಾಡುವದಿಲ್ಲ.

ಸುರಪುರದ ಬೇಡದೊರೆಗಳನೇಕರು ಸಾಕ್ಷಾತ್ಕಾರವನ್ನು ಹೊಂದಿದ ಮಹಾ ಆಧ್ಯಾತ್ಮಿಕ ಜೀವಿಗಳಾಗಿದ್ದರು. ಇವರು ತಿರುಪತಿಯ ಶ್ರೀ ವೆಂಕಟೇಶ್ವರನ ಪರಮ ಭಕ್ತರು ಇಂದಿಗೂ ತಿರುಪತಿಯಲ್ಲಿ ಪ್ರತಿದಿನವೂ ಸುರಪುರದ ಬೇಡ ದೊರೆಗಳ ಹೆಸರಿನಿಂದಲೇ ಪ್ರಪ್ರಥಮ ಅಗ್ರಪೂಜೆಯು ಸಲ್ಲುತ್ತಿದೆಯಲ್ಲದೆ ಈ ಅರಸರಿಂದಲೇ ಅಲ್ಲಿನ ಶಯನೋತ್ಸವ ವ್ಯವಸ್ಥೆಯು ನೆರವೇರುತ್ತದೆ. ದಸರೆಯಲ್ಲಿನ ನವರಾತ್ರಿಯ ಶ್ರೀವೆಂಕಟೇಶ್ವರ ಸ್ವಾಮಿ ಅರ್ಚನೆ ವಿವಾಹ ಮೆರವಣಿಗೆ ಇತ್ಯಾದಿ ಪ್ರಸಂಗಗಳು ಅತ್ಯಂತ ವಿಜೃಂಭಣೆಯಿಂದ ನೆರವೇರುತ್ತದೆ. ಆಗ ಸುರಪುರ ದೊರೆಗಳ ಧಾರ್ಮಿಕ ಪ್ರತಿನಿಧಿಗಳ ಆಯಾ ಮಂಗಳ ಕಾರ್ಯಗಳಲ್ಲಿ ಭಾಗವಹಿಸುವವರಲ್ಲದೆ ತಿರುಪತಿಯಲ್ಲಿ ಸುರಪುರದ ದೊರೆಗಳಿಂದ ಕಟ್ಟಿಸಿದ ದಿವ್ಯ ಛತ್ರದೊಂದಿಗೆ ಆ ಛತ್ರದಿಂದಲೇ ನವರಾತ್ರಿಯ ಕೊನೆಯ ದಿನದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ರಥೋತ್ಸವವು ನೆರವೇರುತ್ತದೆ. ಪ್ರತಿ ವರ್ಷ ಸುರಪುರದಲ್ಲಿ ಶ್ರೀವೇಣುಗೋಪಾಲ ಸ್ವಾಮಿಯ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಅಂದು ದೊರೆಗಳ ಅರಮನೆಯಲ್ಲಿರುವ ಮಹಿಳೆಯರು ದರಬಾರದ ಎರಡನೆ ಅಂತಸ್ತಿನಲ್ಲಿರುವ ಕಿಟಕಿಯ ಮುಖಾಂತರ ದೇವರ ದರ್ಶನ ಪಡೆದು ಧನ್ಯರಾಗುತ್ತಾರೆ. ಒಂದು ವಿಶೇಷವೇನೆಂದರೆ ಶ್ರೀ ವೇಣುಗೋಪಾಲ ಸ್ವಾಮಿಯ ಮೂರ್ತಿಯು ಅರಮನೆಯ ಕಿಟಕಿಗೆ ನೇರವಾಗಿ ಕಾಣುತ್ತದೆ. ಜಾತ್ರೆಯ ಮೊದಲನೆ ದಿನ ರಾಜ ವ್ರಜ ಕಿರೀಟ ಧರಿಸಿಕೊಂಡು ಮೆರವಣಿಗೆ ಮೂಲಕ ದೇವರ ದರ್ಶನ ಪಡೆದು ಮುಂದಿನ ಕಾರ್ಯಕ್ರಮಕ್ಕೆ ಚಾಲನೆ ನೀಡುತ್ತಾನೆ. ದಸರಾ ನವರಾತ್ರಿಯ ೯-೧೧ನೇ ದಿನಗಳವರೆಗೆ ದೀಪಕ್ಕೆ ಬೆಳಗಿಸುತ್ತಾರೆ. ಆ ದಿನಗಳ ಕಾಲ ಆ ದೀಪವನ್ನು ಆರದಂತೆ ಜಾಗ್ರುಕತೆಯಿಂದ ನೋಡಿಕೊಳ್ಳುತ್ತಾರೆ. ನಂತರ ಮನೆಗಳಲ್ಲಿ ಇರುವ ಶಸ್ತ್ರಾಸ್ತ್ರಗಳಾದ ಖಡ್ಗ, ಬಂದೂಕು, ಬರ್ಚಿ ಹಾಗೂ ಇನ್ನಿತರ ಆಯುಧಗಳ ಪೂಜೆಯನ್ನು ಮಾಡುತ್ತಾರೆ.

## ಬೇಡ ಸಮುದಾಯದ ಮಹಿಳೆ

ಸಗರನಾಡಿನಲ್ಲಿ ಬೇಡ ಮಹಿಳೆಯರು ಒಂದು ರೀತಿಯಲ್ಲಿ ಪಂಜರದ ಗಿಳಿಗಳಿಂದ್ದಂತೆ ಅಂದರೆ ಅವರಿಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲ, ನಾಲ್ಕುಗೋಡೆಗಳ ಮಧ್ಯೆಯೆ ಇರಬೇಕು. ಎಂಬ ವಾದ ಈ ಸಮುದಾಯದ ಪುರುಷರದ್ದಾಗಿದೆ. ಸುರಪುರ ಸಂಸ್ಥಾನದ ಕೆಲವು ಬೇಡ ಮಹಿಳೆಯರಿಗೆ ಪರದ ಪದ್ಧತಿಯಂತಹ ಘೋಶಾ ಪದ್ಧತಿ ಇದೆ. ಸಂಸ್ಥಾನಕ್ಕೆ ಸಂಬಂಧ ಪಟ್ಟಿರುವ ಬೇಡ ಮಹಿಳೆಯರಲ್ಲಿ ಇದನ್ನು ಇಂದಿಗೂ ಕಾಣಬಹುದು. ಆದರೆ ಸಾಮಾನ್ಯ ಬೇಡ ಮಹಿಳೆಯರಿಗೆ ಈ ಪದ್ಧತಿ ಇಲ್ಲ ಎಂಬುದೇ ಸಮಾದಾನಕರ ವಿಷಯ. ಈ ಮೊದಲು ಅರಮನೆಯ ರಾಣಿಯರಿಗೆ ಮತ್ತು ಸಂಸ್ಥಾನದ ಸಂಬಂಧಿಗಳ ಬೇಡ ಮಹಿಳೆಯರಿಗೆ ಬಸ್ಸಿನಲ್ಲಾಗಲಿ ಅಥವಾ ಯಾವುದೇ ಒಂದು ವಾಹನದಲ್ಲಾಗಲಿ ಯಾರಿಗೂ ಕಾಣದಂತೆ ಅಡ್ಡ ಪರದೆಯನ್ನು ಕಟ್ಟಿಕೊಂಡು ಹೋಗುವ ಉದಾಹರಣೆಗಳುಂಟು. ಪ್ರಸ್ತುತ ದಿನ ಮಾನಗಳಲ್ಲಿ ಈ ಪದ್ಧತಿ ಸ್ವಲ್ಪ ಸಡಿಲವಾಗಿದೆ. ಇದು ಸುರುಪುರದ ಬೇಡ ಮಹಿಳೆಯರ ಸ್ಥಿತಿ ಗತಿಯಾದರೆ ಶಹಾಪೂರ, ಜೇವರ್ಗಿ, ಯಾದಗಿರಿಯ ಬೇಡ ಮಹಿಳೆಯರು ಸ್ವಚ್ಛಂದವಾಗಿ ಸ್ವತಂತ್ರವಾಗಿ ಹೊರಗಡೆ ತಿರುಗಾಡಬಹುದು ಆದರೆ ಕುಟುಂಬದಲ್ಲಿ ಪುರುಷನದ್ದೆ ಆಡಳಿತವಿರುತ್ತದೆ.

ಬೇಡರ ಸಮುದಾಯದಲ್ಲಿ ಗರ್ಭಿಣಿಯರಿಗೆ ಸುರಕ್ಷತೆಯಿಂದ ನೋಡಿಕೊಳ್ಳಲಾಗುತ್ತದೆ. ಗರ್ಭವತಿಯಾದ ಐದು ತಿಂಗಳು ಅಥವಾ ಏಳನೇ ತಿಂಗಳಲ್ಲಿ ಸೀಮಂತ ಕಾರ್ಯಕ್ರಮವನ್ನು ಮಾಡುತ್ತಾರೆ. ಸೀಮಂತ ಎಂದರೆ ಹೊಟ್ಟೆಯಲ್ಲಿರುವ ಮಗು ಆರೋಗ್ಯಕರವಾಗಿ ದಷ್ಟಪುಷ್ಟವಾಗಿ ಬೆಳೆಯಲಿ ಎಂದು ಮನೆಯ ದೇವರಿಗೆ ಬೇಡಿಕೊಂಡು ದೈವಿಕ ಕಾರ್ಯಕ್ರಮಗಳೊಂದಿಗೆ ಗರ್ಭವತಿಗೆ ಸೀರೆ, ಕುಬಸ ಮಾಡುತ್ತಾರೆ. ಅದರಲ್ಲೂ ವಿಶೇಷವಾಗಿ ತವರು ಮನೆಯವರು ಗರ್ಭವತಿಗೆ ಸೀಮಂತ ಮಾಡುತ್ತಾರೆ.

ಗರ್ಭಧಾರಣೆಯಾಗಿ ಎರಡು ತಿಂಗಳು ಗತಿಸುತ್ತಲೆ. ಗರ್ಭಿಣಿಯ ಮುಖಕಳೆ ಮೈಬಣ್ಣ, ಧ್ವನಿ ಏರಿಳಿತವಾಗುತ್ತದೆ. ಅವಳೋರ್ವ ಭಾಗ್ಯದೇವತೆಯಂತೆ ಕಂಗೊಳಿಸುತ್ತಾಳೆ. ಆ ಮನೆತನದ ಪಾಲಿಗೆ ಮಕ್ಕಳನ್ನು ಹೆತ್ತು ಹೊತ್ತುಕೊಡುವ 'ಸೀರಿದೇವಿ' ಎಂದೇ ಎಲ್ಲರೂ ಕಕ್ಕುಲತೆಯಿಂದ ಪ್ರೀತಿಯಿಂದ ನಡೆದುಕೊಳ್ಳುತ್ತಾರೆ. ಸೀಮಂತ ಕಾರಣ, ಅಥವಾ ಕುಬಸ ಮಾಡುವ ಕಾರ್ಯಕ್ರಮಕ್ಕೆ ಬಂದು ಬಳಗದವರು, ನೆರೆಹೊರೆಯ ಎಲ್ಲಾ ಮಹಿಳೆಯರಿಗೆ ಆಮಂತ್ರಣ ಕೊಡಲಾಗುತ್ತದೆ. ಗರ್ಭಿಣಿ ಗೃಹಿಣಿಯನ್ನು ಹಾಸಕ್ಕಿ ಮೇಲೆ ಕೂಡಿಸಿ ಮುಡಿಗೆ ಹೂವಿನ ದಂಡೆಕಟ್ಟಿ ಹೊಸ ಬಟ್ಟೆ ಉಡಿಸಿ ಸಿಂಗರಿಸುತ್ತಾರೆ. ಸುಮಂಗಲೆಯರು ಸೋಬಾನ ಹಾಡುಗಳನ್ನು ಹಾಡುತ್ತಾರೆ. ಉಡಿ ತುಂಬಿ ಆರತಿ ಮಾಡುತ್ತಾರೆ. ಬಂದವರೆಲ್ಲರಿಗೂ ಭರ್ಜರಿ ಊಟೋಪಾಚಾರದ ವ್ಯವಸ್ಥೆಯನ್ನು ಮಾಡಿರಲಾಗುತ್ತದೆ. ಈ ಕಾರ್ಯಕ್ರಮಕ್ಕೆ ಹೆಣ್ಣುಮಕ್ಕಳ ಹೆಚ್ಚಾಗಿ ಕೊಡಿರುತ್ತಾರೆ. ಹೆಣ್ಣಿನ ಜೀವನದಲ್ಲಿ ಇದೊಂದು ತೀರಾ ಮಹತ್ವದ ಶುಭ ಸಂದರ್ಭ. ತುಂಬು ಗರ್ಭಿಣಿಯಾದವಳು ಹೊಳೆ ಹಳ್ಳ

ದಾಟಬಾರದು ದೂರದ ಪ್ರವಾಸ ಮಾಡಕೂಡದು ಹಾವುಗಾರರ ಆಟ, ಸುಡುಗಾಡು ಸಿದ್ಧರ ಆಟ ಯಾವ ಕಾಲಕ್ಕು ನೋಡಬಾರದೆಂಬ ನಿರ್ಬಂಧವಿದೆ.

ಬೇಡ ಜನಾಂಗದಲ್ಲಿ ಮಡಿ-ಮೈಲಿಗೆ ಪದ್ಧತಿ ಅಷ್ಟೊಂದು ಕಟ್ಟುನಿಟ್ಟಾಗಿಲ್ಲ ಎಂದು ಹೇಳಬಹುದು. ಬೇರಳಣಿಕೆಯ ಕೆಲವು ಬೇಡ ಕುಟುಂಬಗಳಲ್ಲಿ ಮಾತ್ರ ಸ್ವಲ್ಪ ಕಟ್ಟುನಿಟ್ಟಾಗಿ ಕಂಡುಬರುತ್ತದೆ. ಈ ವಿಚಾರವನ್ನು ಅನಿವಾರ್ಯವಾಗಿ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. 'ಮಡಿ- ಎಂದರೆ ಶುಚಿರ್ಭೂತ ವಾಗಿರುವುದು.

ಸ್ತ್ರೀಯು ಮುಟ್ಟಾದರೆ ಬಹಿಷ್ಠೆಯಾಗುತ್ತಾಳೆ ಈ ಜನಾಂಗದಲ್ಲಿ ಮಾಸಿಕ ಮುಟ್ಟಾದ ಸ್ತ್ರೀಯಳನ್ನು ಮೈಲಿಗೆಯಾದವಳೆಂದು ಬಹಿಷ್ಟ ಎನಿಸದೆ ಮಡಿವಂತಿಗೆ ಯವಳಂತೆ ಎಂದಿನಂತೆಯೇ ಅವಳಿಗೆ ಮನೆಯೊಳಕ್ಕೆ ಮುಕ್ತ ಅವಕಾಶ ಇದ್ದೆ ಇರುತ್ತದೆ. ದೇವರ ಮನೆ ಪೂಜೆ, ಪುನಸ್ಕಾರ ಆರತಿ, ಎತ್ತೇವುದು ಇತ್ಯಾದಿ ಹೊರತುಪಡಿಸಿ ಉಳಿದೆಲ್ಲದರಲ್ಲೂ ಅವಳು ಉದ್ವಿಗ್ನತೆಗೂ ಒಳಗಾಗದೆ ಸಮಾನ ಚಿತ್ತದಿಂದ ಭಾಗಿಯಾಗಿ ಇರುವವಳಾಗುತ್ತಾಳೆ. ಹಾಗೆಯೇ ಪ್ರತಿ ಹೆಣ್ಣು ವಯೋಮಾನಕ್ಕೆ ತಕ್ಕಂತೆ ಮೈ ನೆರೆಯುವುದು ಸ್ತ್ರೀ ಸಹಜ ದೈಹಿಕ ಪ್ರಕ್ರಿಯೆಯಾಗಿದೆ. ಹೆಣ್ಣು ಮೈನೆರೆಯುವುದಕ್ಕೆ ರಜಸ್ವತಿ, ಋತುಮತಿ, ಪುಸ್ಪವತಿ, ಆಗಿದ್ದಾಳೆ ಎಂಬ ಪದಗಳನ್ನು ಬಳಸುತ್ತಾರೆ. ಹೆಣ್ಣು ಮೈಲಿಗೆಯಾದವಳೆಂದು ಭಾವಿಸಿ ಅವಳನ್ನು ಕೆಲಕಾಲ ಏಕಾಂತದಲ್ಲಿಯೂ ಕೂಡಿಸಲಾಗುತ್ತದೆ. ಐದು ದಿನವಾದ ನಂತರ ಅವಳಿಗೆ ಕಾರ್ಯಕ್ರಮ ಇಟ್ಟುಕೊಳ್ಳುತ್ತಾರೆ. ಅದಾದನಂತರ ಮೈನೆರೆವ ಹೆಣ್ಣನ್ನು ಬೇಡ ಜನಾಂಗದಲ್ಲಿ ಹೆಚ್ಚಾಗಿ ಹೊರಗಡೆ ಕಳುಹಿಸುವುದಿಲ್ಲ ಮತ್ತು ಹೆಚ್ಚಿನ ಶಿಕ್ಷಣವನ್ನು ಕೊಡಿಸುವುದಿಲ್ಲ, ಅದೇ ರೀತಿಯಾಗಿ ಗರ್ಭಿಣಿಗೆ, ಹೆರಿಗೆಯಾದಾಗ ಮನೆಯಲ್ಲಿ ಸೂತಕವಾಗಿದೆ. ಎಂದು ತಿಳಿದುಕೂಡಲೇ ಹೊರಭಾಗಿಲಲ್ಲಿ ಹೊಸ್ತಿಲಿನ ಎರಡು ಬದಿಗಳಲ್ಲಿ ಮಣ್ಣಿನ ಮಡಿಕೆಗಳನ್ನು ಇರಿಸಿ ಅವುಗಳಲ್ಲಿ ತುಸು ನೀರುಹಾಕಿ ಬೇವಿನಕಡ್ಡಿ ತೊಪ್ಪಲು ಇಟ್ಟಿರುತ್ತಾರೆ. ಪಿಶಾಚಿ ಅಥವಾ ಗಾಳಿ, ಮನೆಯ ಒಳಗೆ ಪ್ರವೇಶಿಸಬಾರದೆಂದು ಮುನ್ನೆಚ್ಚರಿಕೆಯ ಕ್ರಮವನ್ನು ಕೈಗೊಳ್ಳುತ್ತಾರೆ. ಒಂದುವೇಳೆ ಆಸ್ಪತ್ರೆಯಲ್ಲಿ ಹೆರಿಗೆಯಾದರೆ ಮನೆಯಲ್ಲಿ ಸೂತಕದ ಛಾಯೆ ಇರುವುದಿಲ್ಲ.

### ಶಿಕ್ಷಣ

ಬೇಡ ಸಮುದಾಯದಲ್ಲಿ ಹಿರಿಯರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವುದು ತೀರಾ ಕಡಿಮೆ ಎಂದು ಹೇಳಬಹುದು. ಅದರಲ್ಲೂ ಮಹಿಳೆಯರಿಗಂತೂ ಶಿಕ್ಷಣ ಇಲ್ಲವೆ ಇಲ್ಲ ಎಂದು ಹೇಳಿದರೆ ಸರಿಹೋದಿತು. ಪುರುಷರು ಅಲ್ಪಸ್ವಲ್ಪ ವಿದ್ಯಾಭ್ಯಾಸವನ್ನು ಕಲಿತು ಶಾಲಾ ಕಾಲೇಜು ಮೆಟ್ಟಿಲನ್ನು ಹೇರಿದರೆ ಮಹಿಳೆಯರ ಪ್ರಾಥಮಿಕ ಶಿಕ್ಷಣವನ್ನು ಕಲಿತಿರುವುದಿಲ್ಲ. ಕಾರಣ ಮಹಿಳೆಯು ನಾಲ್ಕುಗೋಡೆಗಳ ಮಧ್ಯೆಯೇ ಇರಬೇಕು. ಸ್ತ್ರೀಯರಿಗೆ ಹೆಚ್ಚಿನ ಶಿಕ್ಷಣವನ್ನು ಕೊಡಿಸಿದರೆ ಪ್ರಯೋಜನವಿಲ್ಲ. ಎಂಬ ಭಾವನೆ ಬೇಡ ಸಮುದಾಯದಲ್ಲಿ ಬಹು ಹಿಂದಿನ ಕಾಲದಿಂದಲೂ ಬೇರೂರಿ ಬಂದಿದೆ. ಹಾಗೂ ಸಗರನಾಡಿನ ಬೇಡಸಮುದಾಯದ

ಮಹಿಳೆಯರಲ್ಲಿ ಘೋಷಾಪದ್ಧತಿ ಅಥವಾ ಪರದಾಪದ್ಧತಿ ಇರುವುದರಿಂದ ಅವರಿಗೆ ಶಿಕ್ಷಣವನ್ನು ಕೊಡಿಸುವುದಿಲ್ಲ. ಆದರೆ ಇತ್ತೀಚಿನ ದಿನಮಾನಗಳಲ್ಲಿ ಬೇಡ ಸಮುದಾಯದವರು ಆಧುನೀಕರಣಕ್ಕೆ ಒಳಪಟ್ಟಿರುವುದರಿಂದ ಅವರಿಗೆ ಪ್ರಪಂಚಜ್ಞಾನ ಮೂಡಿದೆ. ತಮ್ಮ ಮಕ್ಕಳು ತಮ್ಮಂತೆಯೇ ಅನಕ್ಷರಸ್ಥರಾಗಬಾರದು ಎಲ್ಲರಂತೆಯೇ ವಿದ್ಯಾವಂತರಾಗಿ ದೊಡ್ಡ ದೊಡ್ಡ ಉದ್ಯೋಗವನ್ನು ಪಡೆಯಬೇಕೆಂಬ ಮಾನೋಭಾವನೆಯಿಂದ ಮಹಿಳೆಯರಿಗಾಗಲಿ ಅಥವಾ ಪುರುಷರಿಗಾಗಲಿ ಶಿಕ್ಷಣವನ್ನು ಕೊಡಿಸಲು ಮುಂದಾಗಿದ್ದಾರೆ.

ಶಿಕ್ಷಣವನ್ನು ಪಡೆದಂತೆ ಬೇಡ ಜನಾಂಗದ ಯುವಕ ಯುವತಿಯರು ಪರಿಶಿಷ್ಟ ಪಂಗಡಕ್ಕಿರುವ ಮೀಸಲಾತಿಯನ್ನು ಸದುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಸದುಪಯೋಗವನ್ನು ಪಡೆದುಕೊಂಡಿರುವ ಜನರು ಇಂದು ಎಲ್ಲಾ ಇಲಾಖೆಗಳಲ್ಲಿ ಉದ್ಯೋಗವನ್ನು ಮಾಡುತ್ತಿದ್ದಾರೆ. ಅಲ್ಲದೆ ವಿಶ್ವವಿದ್ಯಾಲಯದ ಮಟ್ಟಕ್ಕೂ ಏರಿ ಸ್ನಾತಕೋತ್ತರ, ಎಂ.ಫಿಲ್, ಪಿಎಚ್.ಡಿ ಪದವಿಗಳನ್ನು ಪಡೆದು ವಿದ್ವಾಂಸರಾಗಿ, ತತ್ವಜ್ಞಾನಿಗಳಾಗಿ, ದೊಡ್ಡ ಭಾಷಣಕಾರರಾಗಿ ಸಾಹಿತಿಗಳಾಗಿ, ಕವಿಗಳಾಗಿ, ಹೊರಹೊಮ್ಮುತ್ತಿದ್ದಾರೆ. ಒಂದು ಗಮನಿಸಬೇಕಾದ ಸಂಗತಿ ಏನೆಂದರೆ ಇಂದು ಬೇಡರು ಎಷ್ಟೇ ಬಡವರಾದರು ಪ್ರಾಥಮಿಕ, ಪ್ರೌಢಶಿಕ್ಷಣವನ್ನು ಕೊಡಿಸುತ್ತಿರುವುದು ಅಭಿವೃದ್ಧಿಯ ಸಂಕೇತ ಎಂದು ಹೇಳಿದರೆ ತಪ್ಪಾಗಲಾರದು. ಇನ್ನು ಒಂದು ಹೆಜ್ಜೆ ಮುಂದಕ್ಕೆ ಹೋಗಿ ಇಂಜಿನೀಯರ್ ಡಾಕ್ಟರುಗಳಾಗಿಯೂ ಸೇವೆಸಲ್ಲಿಸುತ್ತಿದ್ದಾರೆ. ಅಂದರೆ ಬೇಡರು ಮನಸ್ಸುಮಾಡಿದರೆ ಏನೆಲ್ಲಾ ಸಾಧಿಸಬಹುದು ಅನ್ನುವುದಕ್ಕೆ ಇತ್ತೀಚಿಗೆ ಕೆಲವು ನಿದರ್ಶನಗಳು ದೊರಕುತ್ತವೆ. ಅಲ್ಲದೆ ವಕೀಲರಾಗಿ, ಸರಕಾರಿ ವಕೀಲರಾಗಿ ನ್ಯಾಯಾಧೀಶರಾಗಿ, ಹೈಕೋರ್ಟ್ ಜಡ್ಜಂಗಳಾಗಿ, ಪೋಲೀಸ್ ಆಫಿಸರ್‌ಗಳಾಗಿ ಅಬಕಾರಿ ಇಲಾಖೆಯ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ತಮ್ಮ ಅಧಿಕಾರ ಅವಧಿಯಲ್ಲಿ ತಮ್ಮ ಸಮುದಾಯದವರಿಗೆ ಇನ್ನಿತರ ಬೇರೆ ಸಮುದಾಯದವರಿಗೆ ತಮ್ಮ ಕೈಲಾದಷ್ಟು ಮಟ್ಟಿಗೆ ಸಹಾಯ ಸಹಕಾರ ನೀಡುತ್ತಿರುವುದನ್ನು ನೋಡಿದರೆ ಬೇಡರ ಹೃದಯ ಶ್ರೀಮಂತಿಕೆ ಎಂತಹದ್ದು ಎಂಬುದು ಗೊತ್ತಾಗುತ್ತದೆ.

ಶಿಕ್ಷಣದ ಮಹತ್ವವನ್ನು ಬೇಡ ಸಮುದಾಯದವರು ಅರಿತಿರುವುದರಿಂದ ತಮ್ಮ ಸಮುದಾಯದವರಿಗೆ ಶ್ರೀಮಂತ ಬೇಡರು ರಾಜಕಾರಣಿಗಳು, ಉದ್ಯೋಗಸ್ಥರು, ''ವಾಲ್ಮೀಕಿ ಪ್ರಾಥಮಿಕ ಶಾಲೆ'' ವಾಲ್ಮೀಕಿ ಪ್ರೌಢಶಾಲೆ ಏಕಲವ್ಯ ಪ್ರಾಥಮಿಕ ಶಾಲೆಗಳನ್ನು ತೆಗೆದು ಶಿಕ್ಷಣವನ್ನು ಕೊಡುಸುತ್ತಿರುವುದನ್ನು ಇಂದು ಸಗರನಾಡಿನಲ್ಲಿ ನೋಡಬಹುದು. ಅಲ್ಲದೆ ಪರಿಶಿಷ್ಟ ಪಂಗಡ ವಿದ್ಯಾರ್ಥಿ ನಿಲಯಗಳು ಇರುವುದು ಬಡ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ. ಬೇಡ ಸಮುದಾಯದ ವಿದ್ಯಾರ್ಥಿಗಳಿಗೆ ಅದೇ ಸಮುದಾಯದ ಶ್ರೀಮಂತರು, ಶಾಸಕರು, ಮಂತ್ರಿಗಳು ಪ್ರೋತ್ಸಾಹ ಧನವನ್ನು ನೀಡುತ್ತಿದ್ದಾರೆ. ಹಾಗೂ ಈ ಸಮುದಾಯದ ಸಂಘಟನೆ ಸಂಸ್ಥೆಗಳಾದ ''ವಾಲ್ಮೀಕಿ ಸಹಕಾರಿ ಸಂಸ್ಥೆ ಗುಲಬರ್ಗಾ'', ''ವಾಲ್ಮೀಕಿ ಯುವಕ ಸಂಘ ಸುರಪುರ,'' ''ವಾಲ್ಮೀಕಿ ನಾಯಕ ವಿದ್ಯಾರ್ಥಿ ಒಕ್ಕೂಟ ಸುರಪುರ'' ಮತ್ತು ''ಶಹಾಪೂರ ವಾಲ್ಮೀಕಿ ನಾಯಕ ಸಂಘಟನೆಗಳು'' ಈ ಸಮುದಾಯದ ವಿದ್ಯಾರ್ಥಿಗಳಿಗೆ ಆರ್ಥಿಕ ನೆರವನ್ನು ಒದಗಿಸುವುದರ ಜೊತೆಗೆ ಅವರ

ಸಮಸ್ಯೆಗಳಿಗೆ ಸ್ಪಂಧಿಸುತ್ತವೆ. ಈ ಸಮುದಾಯ ಇಂದು ಈ ನಾಡಿನಲ್ಲಿ ಜಾಗೃತಗೊಂಡು ತಮಗೆ ಅನ್ಯಾಯವಾದಾಗ ಪ್ರತಿಭಟಿಸುತ್ತಿವೆ. ಸಗರನಾಡಿನಲ್ಲಿ ಶೇಕಡಾ ೬೫ ರಷ್ಟು ಬೇಡರು ಶಿಕ್ಷಣವನ್ನು ಪಡೆದವರಾಗಿದ್ದಾರೆ. ಮುಖ್ಯವಾಗಿ ಈ ನಾಡು ನೀರಾವರಿಯಿಂದ ಕೂಡಿರುವುದರಿಂದ ಆರ್ಥಿಕವಾಗಿ ಸಬಲರಾಗುತ್ತಿದ್ದಾರೆ.

**ಬೇಡರ ರಾಜಕೀಯ ಜೀವನ**

ಜಗತ್ತಿನ ರಾಜಕೀಯದಲ್ಲಿ ಬೇಡರಷ್ಟು ಸುದೀರ್ಘವಾದ ರಾಜಕೀಯ ರಾಜ್ಯಾಡಳಿತ ರಾಜ್ಯಭಾರವನ್ನು ಯಾವ ಜಾತಿ ಜನಾಂಗ ಸಮುದಾಯವು ಮಾಡಿಲ್ಲ ಎಂದು ಹೇಳಬಹುದು. ಅದರಲ್ಲಿಯೂ ಸಗರನಾಡಿನ ಸುರುಪುರದಲ್ಲಿ ಸುಮಾರು ಮೂನ್ನೂರು ವರ್ಷಗಳಿಂದಲೂ ಇಂದಿನವರೆಗೂ ಬೇಡ ಸಮುದಾಯದವರೆ ಹಿಂದಿನ ರಾಜರುಗಳಾಗಿ, ಅರಸರಾಗಿ, ಪಾಳೆಗಾರರಾಗಿ, ದೊರೆಗಳಾಗಿ, ಇಂದಿನ ಶಾಸಕರಾಗಿ ಮಂತ್ರಿಗಳಾಗಿ ಜನರ ಸೇವೆಯಲ್ಲಿ ತೊಡಗಿದ್ದಾರೆ ಇದು ಆಶ್ಚರ್ಯಪಡುವಂತಹ ಸಂಗತಿಯಾದರೂ ಕೂಡ ನಿಜವಾಗಿದೆ. ಅದಕ್ಕೆ ಕಾರಣ ಸಗರನಾಡಿನ ಜನರು ಬೇಡರ ನಾಯಕತ್ವವನ್ನು ಒಪ್ಪಿಕೊಂಡು ಅವರ ನಾಯಕತ್ವದಲ್ಲಿ ವಿಶ್ವಾಸ ವಿಟ್ಟಿದ್ದಾರೆ. ಬೇಡರನ್ನು ನಂಬಿದರೆ ಪ್ರಾಣವನ್ನು ಕೊಡುತ್ತಾರೆ. ಎಂಬ ಭಾವನೆ ಎಲ್ಲಾ ಜಾತಿ ಧರ್ಮ ಸಮುದಾಯದವರಲ್ಲಿದೆ ಇಂತಹ ಒಂದು ವಿಶೇಷತೆ ಈ ಸಗರನಾಡಿನಲ್ಲಿದೆ. ಅದೇ ರೀತಿಯಾಗಿ ಬೇಡ ಸಮುದಾಯದ ಜನ ಪ್ರತಿನಿಧಿಗಳು ಕೂಡ ಜನರ ನಂಬಿಕೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಪ್ರಸ್ತುತ ದಿನ ಮಾನಗಳಲ್ಲಿ ಸುರಪುರ ಪರಿಶಿಷ್ಟ ಪಂಗಡ ರಾಜಕೀಯ ಮೀಸಲಾತಿಯನ್ನು ಹೊಂದಿರುವುದರಿಂದ ಈ ಸಮುದಾಯದ ರಾಜಕೀಯ ಅಭಿವೃದ್ಧಿಗೆ ಸಹಾಯಕವಾಗಿದೆ. ಉದಾ : ಬೇಡ ಸಮುದಾಯದವರಾದ ರಾಜ ಪಿಡ್ಡನಾಯಕ ೧೯೫೨ ರಿಂದ ೨೦ ವರ್ಷ ಶಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ಶಾಹಪುರದಲ್ಲಿ ಬ್ಯಾರಿಸ್ಟರ್ ರಾಜ ವೆಂಕಟಪ್ಪನಾಯಕ ೧೯೬೭ ರಲ್ಲಿ ಒಂದೇ ಸಲಕ್ಕೆ ಸಂಸದ ಹಾಗೂ ವಿಧಾನ ಸಭೆಗೆ ಆಯ್ಕೆಯಾಗಿ ಒಂದು ಹೊಸ ದಾಖಲೆಯನ್ನು ಸ್ಥಾಪಿಸಿ ನಂತರ ವಿಧಾನಸಭೆಗೆ ರಾಜೀನಾಮೆ ನೀಡಿ ಸಂಸದ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಅವಧಿ ಮುಗಿದ ನಂತರ ರಾಜಕುಮಾರ ನಾಯಕರವರು ಕೂಡ ಎರಡು ಸಲ ಶಾಸಕರಾಗಿ ಆಯ್ಕೆಯಾಗಿದ್ದಾರೆ. ತದನಂತರ ರಾಜಾ ಮದನ ಗೋಪಾಲನಾಯಕ ಇವರು ಮೂರು ಸಲ ಶಾಸಕರಾಗಿ ಆಯ್ಕೆಯಾಗಿ ಕೃಷಿ ಮಂತ್ರಿಯಾಗಿ ಸೇವೆಸಲ್ಲಿಸಿದ್ದಾರೆ. ನಂತರ ಡಾ. ರಾಜ ವೆಂಕಟಪ್ಪ ನಾಯಕರವರು ಎರಡು ಸಲ ಶಾಸಕರಾಗಿ ಜನರ ಮನಸ್ಸಿನಲ್ಲಿ ಇನ್ನೂ ಉಳಿದಿದ್ದಾರೆ. ಪ್ರಸ್ತುತವಾಗಿ ಶ್ರೀ ನರಸಿಂಹನಾಯಕ (ರಾಜುಗೌಡ)ರವರು ಕನ್ನಡನಾಡು ಪಕ್ಷಕ್ಕೆ ನಿಂತು ಅತಿ ಚಿಕ್ಕ ವಯಸ್ಸಿಗೆ ಶಾಸಕರಾಗಿ ರಾಜ್ಯದ ಗಮನವನ್ನು ಸೆಳೆದಿದ್ದಾರೆ. ಅಲ್ಲದೆ ಗುಲಬರ್ಗಾ ಜಿಲ್ಲಾ ಪಂಚಾಯತಿ ಸದಸ್ಯರಾಗಿ ಉಪಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಅಲ್ಲದೆ ಕರ್ನಾಟಕದ ಮೂವತ್ತನೆ ಹೊಸ ಜಿಲ್ಲೆಯಾದ ಯಾದಗಿರಿಗೆ ಪ್ರಥಮ ಜಿಲ್ಲಾ ಪಂಚಾಯತಿ ಅಧ್ಯಕ್ಷರಾಗಿ ರಾಜಾ ಹನುಮಪ್ಪ ನಾಯಕರವರು ಆಯ್ಕೆಯಾಗಿ ಆಶ್ಚರ್ಯವನ್ನು ಮೂಡಿಸಿ ಹುಬ್ಬೇರಿಸುವಂತೆ ಮಾಡಿದ್ದಾರೆ.

ಹಾಗೂ ತಾಲೂಕಾ ಪಂಚಾಯತಿ ಸದಸ್ಯರಾಗಿ ಗ್ರಾಮ ಪಂಚಾಯತಿ ಸದಸ್ಯರುಗಳಾಗಿ ಅಧ್ಯಕ್ಷರುಗಳಾಗಿ ಪುರಸಭೆಯ ಅಧ್ಯಕ್ಷ ಉಪಾಧ್ಯಕ್ಷರುಗಳಾಗಿ ಸೇವೆ ಸಲ್ಲಿಸುವುದರ ಜೊತೆಗೆ ರಾಜಕೀಯದಲ್ಲಿ ನಿಪುಣತೆಯನ್ನು ಪಡೆದವರಾಗಿದ್ದಾರೆ. ಸಗರನಾಡಿನಲ್ಲಿ ಬೇಡರಲ್ಲಿ ರಾಜಕೀಯ ಎಂಬುದು ನರನಾಡಿಯಲ್ಲಿ ಹರಿಯುತ್ತಿದೆ. ಚುನಾವಣೆ ಬಂದಾಗಲಂತೂ ಸಗರನಾಡಿನ ಸುರಪುರ ರಾಜ್ಯದ ಗಮನವನ್ನು ಸೆಳೆಯುತ್ತದೆ. ಈ ಸಂದರ್ಭದಲ್ಲಿ ದೊಂಬಿ ಗಲಾಟೆ ಸಂಘರ್ಷ ಜಗಳ ರಕ್ತಪಾತ ಸರ್ವೆಸಾಮಾನ್ಯ ಎಂದು ಹೇಳುವುದು ವಿಷಾದವೆನಿಸುತ್ತದೆ. ಪ್ರತಿಯೊಂದು ಚರ್ಚಾ ವಿಷಯವು ಕೂಡ ರಾಜಕೀಯವಾಗಿ ಮಾರ್ಪಾಡುತ್ತದೆ.

ಶಹಾಪುರ ಜೇವರ್ಗಿ ತಾಲ್ಲೂಕುಗಳಲ್ಲಿಯೂ ಕೂಡ ಬೇಡ ಜನಾಂಗದವರು ಸ್ವಲ್ಪ ಮಟ್ಟಿಗೆ ರಾಜಕೀಯದಲ್ಲಿ ತೊಡಗಿದ್ದಾರೆ. ಆ ತಾಲ್ಲೂಕುಗಳಲ್ಲಿ ಕೂಡ ಜಿಲ್ಲಾ ಪಂಚಾಯತಿ ತಾಲ್ಲುಕು ಪಂಚಾಯತಿ ಗ್ರಾಮ ಪಂಚಾಯತಿ ಪುರಸಭೆ ಸದಸ್ಯರುಗಳಾಗಿ ಆಯ್ಕೆಯಾಗುತ್ತಿದ್ದಾರೆ.

### ಸಗರನಾಡಿನ ಬೇಡ ಸಮುದಾಯದ ಅಭಿವೃದ್ಧಿಯ ಬಗೆ

೧. ರಾಜಕೀಯ ದ್ವೇಷ ಬಿಟ್ಟು ಎಲ್ಲರು ಒಗ್ಗಟ್ಟಾಗಬೇಕು.

೨. ಬೇಡರು ಆರ್ಥಿಕ ಅಭಿವೃದ್ಧಿಯಲ್ಲಿ ಮುನ್ನುಗ್ಗಬೇಕು ಆಗಲೇ ಇತರ ಪ್ರಗತಿಗೆ ನಾಂದಿಯಾಗುತ್ತದೆ.

೩. ಬೇಡ ಜನಾಂಗದ ಅಭಿವೃದ್ಧಿಗೆ ಎಲ್ಲರು ಶ್ರಮಿಸಬೇಕು.

೪. ಸಗರನಾಡಿನ ಬೇಡರಿಗೆ ತನ್ನದೆಯಾದ ಸಾಂಸ್ಕೃತಿಕ ವೀರ ಪರಂಪರೆ ಇದೆ. ಈ ಚೌಕಟ್ಟಿನಲ್ಲಿ ವಾಲ್ಮೀಕಿ ಜಯಂತಿ ಬೇಡರ ಕಣ್ಣಪ್ಪನ ಜಯಂತಿ, ಕನಕದಾಸ ಜಯಂತಿ ಸಿಂಧೂರ ಲಕ್ಷ್ಮಣ ಮೊದಲಾದವರ ಜನ್ಮ ದಿನಾಚರಣೆಗಳನ್ನು ತಪ್ಪದೇ ಆಚರಿಸಬೇಕು. ಇದರಲ್ಲಿಯು ರಾಜಕೀಯ ಮಾಡಬಾರದು.

೫. ಸಗರನಾಡಿನ ಉತ್ಸವ ಸುರಪುರ ಉತ್ಸವಗಳನ್ನು ಸರ್ಕಾರವೇ ಮಾಡುವಂತೆ ಒತ್ತಡ ಹೇರಬೇಕು.

೬. ವಾಲ್ಮೀಕಿ ಜಯಂತಿಯನ್ನು ಸರಕಾರದ ಮುಖಾಂತರ ಎಲ್ಲರೂ ಆಚರಣೆ ಮಾಡುವಂತೆ ಮತ್ತು ಆ ದಿನ ಸಾರ್ವತ್ರಿಕ ರಜಾ ಘೋಷಣೆ ಮಾಡಬೇಕು.

೭. ರಾಜಕೀಯವಾಗಿ ಸಾಂಸ್ಕೃತಿಕವಾಗಿ ಜನರನ್ನು ಜಾಗೃತಗೊಳಿಸಬೇಕು

೮. ಸರ್ಕಾರಿ ಸೌಲಭ್ಯಗಳನ್ನು ಗರಿಷ್ಠ ಪ್ರಮಾಣದಲ್ಲಿ ವಿನಿಯೋಗಗೊಳ್ಳುವಲ್ಲಿ ಉಡಾಫೆ, ತಾತ್ಸಾರ ಮಾಡಬಾರದು.

೯. ಸಗರನಾಡು, ಬೇಡ ಸಮುದಾಯ ಸುರಪುರ ಅರಸರ ಬಗ್ಗೆ ಆಗಾಗ ವಿಚಾರ ಸಂಕಿರಣಗಳನ್ನು ಏರ್ಪಡಿಸಬೇಕು.

೧೦. ಆರ್ಥಿಕ ಬೆಳವಣಿಗೆ ಮತ್ತು ಸಾಮಾಜಿಕ ಸುಧಾರಣೆಗಳು ಶೈಕ್ಷಣಿಕ, ಪ್ರಗತಿ ಜಾಗೃತಿಗೆ ಮುಂದಾಗಬೇಕು.

೧೧. ಮ್ಯಾಸ ಬೇಡರು, ಊರುಬೇಡರು, ಎಂಬ ಪದಗಳನ್ನು ಎಂದಿಗೂ ಬಳಸದೆ ನಾವೆಲ್ಲ ಒಂದೇ ಸಮುದಾಯದವರು ಎಂಬ ಭಾವನೆ ಮೂಡಿಸಬೇಕು.

೧೨. ಹಿಂದುಳಿದ ಪ್ರದೇಶವಾಗಿರುವ ಸಗರನಾಡಿನ ಬೇಡ ಸಮುದಾಯದ ವಿದ್ಯಾರ್ಥಿಗಳಿಗೆ ಈ ಸಮುದಾಯದ ಗಣ್ಯರು, ಮುಖಂಡರು ಉಳ್ಳವರು ಸಹಾಯ ಸಹಕಾರ ನೀಡಬೇಕು.

೧೩. ಸಗರನಾಡಿನಲ್ಲಿರುವ ಬೇಡ ವಿದ್ಯಾರ್ಥಿಗಳಿಗೆ ಸರಕಾರಿ ನೌಕರಿಗಳನ್ನು ಕೊಡಿಸಲು ಸಮುದಾಯದ ರಾಜಕೀಯ ವ್ಯಕ್ತಿಗಳು ಪ್ರಯತ್ನ ಪಡಬೇಕು.

೧೪. ಸಗರನಾಡಿನಲ್ಲಿರುವ ವಾಲ್ಮೀಕಿ ಮಂದಿರಗಳಿಗೆ ಸರಕಾರ ಅನುದಾನ ನೀಡುವಂತೆ ಸರಕಾರದ ಮೇಲೆ ಒತ್ತಡ ಹೇರಬೇಕು.

೧೫. ಕರ್ನಾಟಕ ರಾಜ್ಯದಲ್ಲಿ ಬೇರೆ ಬೇರೆ ಜಾತಿಯ ಜನಾಂಗದವರ ಮಠಗಳಿಗೆ ಸರಕಾರದಿಂದ ಹೇಗೆ ಹಣ ಬಿಡುಗಡೆಯಾಗುತ್ತದೆಯೋ ಅದೇ ರೀತಿಯಲ್ಲಿ ಬೇಡ ಜನಾಂಗದ ಮಠಕ್ಕೆ ಮಠದ ಅಭಿವೃದ್ಧಿಗೆ ಸರಕಾರದಿಂದ ಹಣ ಮಂಜೂರು ಮಾಡಿಸಿಕೊಳ್ಳಬೇಕು.

೧೬. ಕೇಂದ್ರ ಸರಕಾರದಲ್ಲಿ ಎಸ್.ಟಿ. ಜನಾಂಗಕ್ಕೆ ಶೇಕಡಾ ೭.೫ ಇದೆ. ಆದರೆ ನಮ್ಮ ಕರ್ನಾಟಕ ರಾಜ್ಯದಲ್ಲಿ ಸುಮಾರು ೬೫ ಲಕ್ಷ ಜನಸಂಖ್ಯೆಯನ್ನು ಹೊಂದಿರುವ ಬೇಡ ಸಮುದಾಯಕ್ಕೆ ರಾಜ್ಯ ಸರಕಾರ ನೀಡುತ್ತಿರುವುದು ಕೇವಲ ಶೇಕಡಾ ೩ರಷ್ಟು ಇಂತಹ ತಾರತಮ್ಯ ಮಾಡದೆ ಸರಕಾರ ಬೇಡ ಜನಾಂಗಕ್ಕೆ, ೬.೫ ಪ್ರತಿಶತ ಮೀಸಲಾತಿಯನ್ನು ಒದಗಿಸಬೇಕು.

೧೭. ಬೇಡ ಜನಾಂಗದವರು ಬೇರೆ ಬೇರೆ ಸಮಾಜದವರನ್ನು ಪ್ರೀತಿಯಿಂದ ಕಾಣಬೇಕು ಸಂಕೋಚ ಪಡಬಾರದು ಬೇಡರು ಇತರರನ್ನು ಪ್ರೀತಿಸಬೇಕು ಇತರರ ಮನಸ್ಸನ್ನು ಗೆಲ್ಲಬೇಕು.

೧೮. ಬೇಡ ಜನಾಂಗದವರು ಬೇರೆ ಜನಾಂಗದವರಿಗೆ ಮಾದರಿಯಾಗಬೇಕು.

೧೯. ಬೇಡ ಜನಾಂಗದವರು ತಮ್ಮ ಮಹಿಳೆಯರಿಗೆ ಶಿಕ್ಷಣವನ್ನು ಕೊಡಿಸಿ ಸಾಮಾಜಿಕ ಪ್ರಜ್ಞೆ ಮೂಡಿಸಬೇಕು.

# ಅಧ್ಯಾಯ ೪

# ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆ

**ಪೀಠಿಕೆ**

ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಯುಗದವರೆಗೂ ಮಹಿಳೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತ ಬಂದಿದ್ದಾಳೆ. ಸಮಸ್ಯೆ, ಸಂತೋಷ, ಸವಾಲು, ಫಲಿತ, ಫಲ, ಸಂಘರ್ಷ, ಸಮಾದಾನ ಸೋಲು-ಗೆಲುವು ನೋವು-ನಲಿವು ಪ್ರತಿಕೂಲ-ಅನುಕೂಲ ಇಂಥ ಅನೇಕ ಸಂದಿಗ್ಧ ದ್ವಂಧ್ವಗಳಲ್ಲಿ ಮಹಿಳೆ ಕತ್ತಿ ಅಲುಗಿನ ಮೇಲೆ ಹಿಂದೆ ನಡೆದಿದ್ದಾಳೆ ಇಂದು ನಡೆಯುತ್ತಿದ್ದಾಳೆ. ದ್ವಿತೀಯ ದರ್ಜೆಯ ಪ್ರಜೆಯಾಗಿ ಪರಿಗಣಿತಳಾದ ಹೆಣ್ಣು ಸಾಗಿಬಂದ ದಾರಿ ಸುಧೀರ್ಘವಾದುದ್ದು ಮಹಿಳೆ ಕತ್ತಲಲ್ಲಿ ನಡೆದಿದ್ದೆ ಹೆಚ್ಚು ಅಲ್ಲೋಮ್ಮೆ ಮಬ್ಬುಗತ್ತಲು ಇಲ್ಲೊಮ್ಮೆ ಬೆಳಕು ಅವಳ ಬದುಕಿನಲ್ಲಿ ಹಾದು ಹೋದದ್ದುಂಟು. ಈ ಹಿಂದೆ ಮಹಿಳೆ ಸಾಮಾಜಿಕವಾಗಿ ಆರ್ಥಿಕವಾಗಿ ರಾಜಕೀಯವಾಗಿ ಹಿಂದುಳಿದ್ದಳು. ಆದರೆ ಮಹಿಳೆಯ ನಿರಂತರ ಹೋರಾಟದ ಪ್ರತಿಫಲವಾಗಿ ಈ ಶತಮಾನದ ಹೊಸ್ತಿಲಲ್ಲಿ ನಿಂತು ಹಿಂತಿರುಗಿ ನೋಡಿದಾಗ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸಾಹಿತ್ಯಿಕ ಹಾಗೂ ಶೈಕ್ಷಣಿಕವಾಗಿ ಸ್ವಲ್ಪ ಮುನ್ನಡೆಯುತ್ತಿದ್ದಾಳೆ. ಎನ್ನುವ ಸಮಾದಾನ ದೊರೆಯುತ್ತದೆ. ಆದರೆ ಅದು ಸಂತೃಪ್ತಿಯ ಸಮಾಧಾನವಲ್ಲ ಮಹಿಳೆಯ ಹೋರಾಟ ಇನ್ನೂ ತೀವ್ರವಾಗಬೇಕಿದೆ.

೨೧ನೆಯ ಶತಮಾನದಲ್ಲಿಯು ಮಹಿಳೆ ಸಮಸ್ಯೆಗಳಿಂದ ಬೀಳುವುದಕ್ಕೆ ಪ್ರಮುಖ ಕಾರಣ ಪುರುಷ ಪ್ರಧಾನ ಸಮಾಜ ಮತ್ತು ಆತನ ನಿರ್ಬಂಧನೆಗಳು. ''ಲೈಂಗಿಕ ಕಿರುಕುಳ ಅತ್ಯಾಚಾರ, ಸ್ವಾತಂತ್ರ್ಯ ಕೊಡದೇ ಇರುವುದು, ಆರ್ಥಿಕ ಸಮಸ್ಯೆ, ಸಾಮಾಜಿಕ ಸಮಸ್ಯೆ. ಇನ್ನು ಮುಂತಾದ ಸಮಸ್ಯೆಗಳಿಂದ ಅವಳು ಸಂಪೂರ್ಣ ಸೋತು ಸೊರಗಿ ಹೋಗಿದ್ದಾಳೆ. ಅದರಲ್ಲೂ ಸಗರನಾಡಿನ ಬೇಡ ಮಹಿಳೆಯರ ಪಾಡಂತೂ ಹೇಳತೀರದು. ಇಂದು ಬೇಡ ಮಹಿಳೆಯರು ಪಂಜರದಲ್ಲಿರುವ ಗಿಳಿಗಳಂತೆ ನಾಲ್ಕು ಗೋಡೆಗಳ ಮಧ್ಯೆಯೆ ಇದ್ದು ತಮ್ಮ ಮನಸ್ಸಿನ ಭಾವನೆಗಳನ್ನು ಅದುಮಿಕೊಳ್ಳುತ್ತಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬೇಡ ಮಹಿಳೆಗೆ

ಅಷ್ಟಾಗಿ ಸ್ವಾತಂತ್ರ್ಯವಿಲ್ಲ, ಅದರಲ್ಲೂ ಸುರಪುರ ತಾಲ್ಲೂಕಿನ ಬೇಡ ಮಹಿಳೆಯರು ಆಟದ ಗೊಂಬೆಗಳಂತೆ ಎಂದು ಹೇಳಿದರೆ ತಪ್ಪಾಗಲಾರದು, ಶಹಾಪೂರ ಜೇವರ್ಗಿ ತಾಲ್ಲೂಕುಗಳಲ್ಲಿ ಮಹಿಳೆಯರಿಗೆ ಸ್ವಲ್ಪ ಮಟ್ಟಿಗೆ ಸ್ವಾತಂತ್ರ್ಯವಿದ್ದರೂ ಅದು ಅಷ್ಟಕಷ್ಟೆ. ವಿವಾಹ ಕುಟುಂಬ, ಸಾಮಾಜಿಕ ವಿಚಾರಗಳಲ್ಲಿ ವಿಷಯ ವಿನಿಮಯ ಮಾಡಿಕೊಳ್ಳಲು ಅವಳಿಗೆ ಅವಕಾಶವಿಲ್ಲ. ಮನೆಯನ್ನು ಬಿಟ್ಟು ಹೊರಗಡೆ ಹೋಗಿ ಜನರ ಜೊತೆ ಮಾತನಾಡಲು ಭಾವನೆಗಳನ್ನು ಹಂಚಿಕೊಳ್ಳಲು ಬೇಡರ ಜನಾಂಗದಲ್ಲಿ ಮಹಿಳೆಗೆ ಅವಕಾಶವನ್ನು ನೀಡಲಾಗಿಲ್ಲ, ಈ ಹಿಂದೆ ಮಹಿಳೆಯನ್ನು ಬರಿ ಅಡುಗೆ ಮನೆಗೆ ಮಾತ್ರ ಸೀಮಿತಗೊಳಿಸಿ ಮಕ್ಕಳ ಲಾಲನೆ-ಪಾಲನೆ ಪೋಷಣೆಗೆ ಅವಳನ್ನು ನೇಮಿಸಲಾಗುತ್ತಿತ್ತು.

ಬಡ ಬೇಡ ಕುಟುಂಬಗಳಲ್ಲಿ ಮಹಿಳೆಯರು ಹೊಲ-ಗದ್ದೆ ಮನೆ ಕೆಲಸಗಳಿಗೆ ಹೋಗಿ ದುಡಿದು ತಂದಂತಹ ಹಣವನ್ನು ಪುರುಷನಿಗೆ ಕೊಟ್ಟು ತಾನು ಏನೂ ಕಾಣದಂತಾಗುತ್ತಾಳೆ. ಪುರುಷನಿಗೆ ಸರಿಸಮಾನವಾಗಿ ಹೊಲ-ಮನೆ ಗದ್ದೆಗಳಲ್ಲಿ ದುಡಿದರು ಅವಳಿಗೆ ಸಮಾಜದಲ್ಲಿ ಸಮಾನತೆ ಇನ್ನೂ ಸಿಕ್ಕಿಲ್ಲ. ರಾಜ ಮನೆತನಕ್ಕೆ ಸಂಬಂಧ ಪಟ್ಟಿರುವ ಬೇಡ ಮಹಿಳೆಯರು ಸಾಮ್ರಾಜ್ಯದ ಇತರ ಬೇಡ ಮಹಿಳೆಯರಿಗಿಂತ ಅಧಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಉಸಿರು ಗಟ್ಟಿಸುವಂತಹ ಜೀವನ ಅವರದು. ಮತ್ತು ಯಾರ ಮುಂದೆಯೂ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುವಂತಿಲ್ಲ. ಪಾಲಿಗೆ ಬಂದದ್ದು ಪಂಚಾಮೃತ ಎಂದು ತಿಳಿದು ತಮಗೆ ಬಂದಿರುವ ಸಮಸ್ಯೆಗಳನ್ನು ತಾವೇ ನುಂಗಿಕೊಳ್ಳುತ್ತಾರೆ. ಪುರುಷರು ಹಾಕಿಕೊಟ್ಟ ನಿಯಮಗಳನ್ನು ಇಂದಿಗೂ ಪಾಲಿಸುತ್ತಾ ಬಂದಿದ್ದಾರೆ. ಅಂದರೆ ಮಹಿಳೆಯರು ಮನಯ ಒಳಗಡೆಯೇ ಇರಬೇಕು ಹೊರಗಡೆ ಬಂದರು ಮೈತುಂಬ ಸೆರಗು ಹೊದ್ದುಕೊಂಡಿರಬೇಕು. ಮುಖ ಕಾಣದಂತೆ ಸೆರಗು ಹಾಕಿಕೊಳ್ಳಬೇಕು. ಒಂದು ವೇಳೆ ಪ್ರಯಾಣ ಮಾಡುವದಿದ್ದರೆ ವಾಹನಗಳಿಗೆ ಅಡ್ಡ ಪರದೆ ಕಟ್ಟಿಕೊಂಡು ಹೋಗಬೇಕು. ಹೆಚ್ಚಾಗಿ ಪುರುಷರ ಜೊತೆ ಮಾತನಾಡಬಾರದು. ಸಾಮಾನ್ಯ ಮಹಿಳೆಯರಂತೆ ವರ್ತಿಸಬಾರದು, ಎಂದು ಹೀಗೆ ಹತ್ತು ಹಲವಾರು ನಿಯಮಗಳನ್ನು ನಿರ್ಬಂಧಗಳನ್ನು ಬೇಡ ಸಮುದಾಯದಲ್ಲಿ ಕಾಬಹುದಾಗಿದೆ. ಒಂದು ವೇಳೆ ಮಹಿಳೆ ಇವುಗಳನ್ನು ಮೀರಿದರೆ ಶಿಕ್ಷೆ ಕಟ್ಟಿಟ್ಟದ್ದು ಅಂತೆಯೇ ಬೇಡ ಮಹಿಳೆಯರು ಈ ಕಟ್ಟುಪಾಡುಗಳಿಗೆ ತಕ್ಕಂತೆ ನಡೆದುಕೊಳ್ಳುತ್ತಾರೆ. ಬೇಡ ಮಹಿಳೆಯರನ್ನು ಹೊರಗಡೆ ಬಿಡದ ಕಾರಣ ಸಾಮಾಜಿಕ ಪ್ರಜ್ಞೆ ಅಷ್ಟಾಗಿ ಇಲ್ಲವಾಗಿದೆ. ಸಗರನಾಡಿನಲ್ಲಿ ಯಾವುದೇ ರೀತಿಯ ವ್ಯಾಪಾರ ವ್ಯವಹಾರಗಳಲ್ಲಿ ಇವಳು ತೊಡಗಿಕೊಂಡಿಲ್ಲ. ಮತ್ತು ರಾಜಕೀಯದ ಗಂಧ-ಗಾಳಿಯು ಇವಳಿಗೆ ತಿಳಿದಿಲ್ಲ, ಬೇಡರ ಕುಟುಂಬಗಳಲ್ಲಿ ಹೆಣ್ಣು ಮಗಳು ಮೈನೆರದರೆ ಅಂದರೆ ದೊಡ್ಡವಳಾದರೆ ಅವಳನ್ನು ನಾಲ್ಕು ಗೋಡೆಗಳ ಮಧ್ಯೆಯೇ ಇರಿಸಿ ಬಿಡುತ್ತಾರೆ. ಶಾಲೆ, ಕಾಲೇಜುಗಳಿಗೆ ಕಳಿಸದೆ ಬೇಗನೆ ಮದುವೆ ಮಾಡಿಕೊಡುತ್ತಾರೆ. ಎಲ್ಲಾ ಜಾತಿ ಸಮುದಾಯಗಳಿಗಿಂತ ಬೇಡ ಸಮುದಾಯದಲ್ಲಿ ಅಕ್ಷರಸ್ಥರು ಕಡಿಮೆ ಎಂದರೆ ಆಶ್ಚರ್ಯವಾಗಬೇಕಿಲ್ಲ. ಶಿಕ್ಷಣ ಅವಳಿಗೆ ಅನಾವಶ್ಯಕ ಎಂಬ ವಾದ ಸಗರನಾಡಿನ ಬೇಡರ ಸಮುದಾಯದಲ್ಲಿದೆ.

ಇಂದಿನ ಜಾಗತೀಕರಣ, ಉದಾರೀಕರಣ, ಆಧುನೀಕರಣದ ಹಿನ್ನೆಲೆಯಲ್ಲಿ ಶಿಕ್ಷಣ ಸಗರನಾಡಿನ ಬೇಡ ಮಹಿಳೆಯರ ಮೇಲೆ ಅಷ್ಟಾಗಿ ಪ್ರಭಾವ ಬೀರಿಲ್ಲ. ಬೇಡರ ಮಹಿಳೆಯರ ಸಾಮಾಜಿಕ ಸಮಸ್ಯೆಗಳು ಇಂದು ನಿನ್ನೆಯವುಗಳಲ್ಲ ಅವು ಎಲ್ಲರಿಗೆ ಎಲ್ಲಾ ಕಾಲಗಳಲ್ಲಿಯು ಪರಿಚಿತವಾದವುಗಳೇ ಆಗಿವೆ. ಸಮಸ್ಯೆಗಳೆಂದರೆ ವಿವಾಹ ವಿಚ್ಛೇದನ, ಬಸವಿ ಪದ್ದತಿ, ಘೋಶಾಪದ್ಧತಿ, ಅತ್ಯಾಚಾರ, ದೌರ್ಜನ್ಯ, ಬಾಲ್ಯವಿವಾಹ, ವರದಕ್ಷಿಣೆ ಸಮಸ್ಯೆ, ವಿಧವಾ ವಿವಾಹ ಸ್ತ್ರೀ ಭ್ರೂಣಹತ್ಯೆ, ಶೈಕ್ಷಣಿಕ ಸಮಸ್ಯೆ, ಮಹಿಳೆಯರಿಗೆ ಮಾನಸಿಕ ಕಿರುಕುಳ, ಕೀಳುಮಟ್ಟದ ಸ್ಥಾನ-ಮಾನ, ಆರೋಗ್ಯ ಸಮಸ್ಯೆ ಮುಂತಾದವುಗಳು. ಸಾಮಾನ್ಯವಾಗಿ ವಿವಾಹವನ್ನು ತೆಗೆದುಕೊಂಡಾಗ ಹೆಣ್ಣಿಗೆ ತನ್ನ ಜೀವನದ ಸಂಗಾತಿಯನ್ನು ಸ್ವತಃ ತಾನೇ ಆರಿಸಿಕೊಳ್ಳಲು ಸ್ವತಂತ್ರ್ಯವಿಲ್ಲ, ಹಿರಿಯರು ಮನೆಯ ಯಜಮಾನರು, ತಂದೆ ತಾಯಿ ಅಣ್ಣಂದಿರು, ಒಪ್ಪಿದ ವರನನ್ನು ಹೆಣ್ಣಾದವಳು ಒಪ್ಪಿಕೊಂಡು ಮದುವೆಯಾಗಬೇಕು. ಕುಂಟನಾದರೂ ಸಿರಿ, ಕಿವುಡನಾದರೂ ಸರಿ, ಸಣ್ಣ ಪುಟ್ಟ ದೋಷಗಳು ಇದ್ದರು ಅವಳು ಅವನನ್ನು ಭರಿಸಲೇಬೇಕು. ಹಿರಿಯರ ಮಾತಿಗೆ ತಪ್ಪಿ ನಡೆಯುವಂತಿಲ್ಲ. ತನ್ನ ಮನದ ಆಸೆ, ಆಕಾಂಕ್ಷೆ ಭಾವನೆಗಳನ್ನು ವ್ಯಕ್ತ ಪಡಿಸುವಂತಿಲ್ಲ. ಎಲ್ಲವನ್ನೂ ಅದುಮಿಕೊಂಡು ಸಂಸಾರಿಕ ಜೀವನ ಸಾಗಿಸಬೇಕು. ಇಂತಹ ಕಟ್ಟುನಿಟ್ಟಿನ ನಿಯಮಗಳಿಂದ ಅದೆಷ್ಟು ಮಹಿಳೆಯರ ಬಾಳು ನರಕವಾಗಿದೆ.

ಸಗರನಾಡಿನ ಕೆಲವು ಬೇಡ ಮಹಿಳೆಯರನ್ನು ಸಂಪರ್ಕಮಾಡಿ ವೈವಾಹಿಕ ಜೀವನದ ಬಗ್ಗೆ ಕೇಳಿದಾಗ ಅವರ ಕಷ್ಟ-ದುಃಖ-ದುಮ್ಮಾನ, ಇನ್ನಿತರ ಸಮಸ್ಯೆಗಳು ಹೇಳತೀರದು ಉದಾ: ಹಿರಿಯರ ಒಪ್ಪಿಗೆಯ ಮೇರೆಗೆ ತನಗೆ ಇಷ್ಟವಿಲ್ಲದಿದ್ದರೂ ಕುಡುಕ ಗಂಡನನ್ನು ಮದುವೆಯಾದ ದುಗಾಮ್ಮ ಇಂದು ವಿಧವೆಯಾಗಿ ಕಣ್ಣೀರಲ್ಲಿ ಕೈತೊಳೆಯುತ್ತಿದ್ದಾಳೆ. ಹುಡುಗನ ನಡತೆ ಸರಿ ಇಲ್ಲವೆಂದು ಗೊತ್ತಿದ್ದರೂ ಅವನ ಆಸ್ತಿ. ಅಂತಸ್ಥಿಗೆ ಮರುಳಾಗಿ ಮಗಳನ್ನು ದಾರೆಯರೆದು ಕೊಟ್ಟ ಹುಲುಗಪ್ಪ, ಧನದಾಯಿ ಬೀಗರ ನೀಚಕೃತ್ಯಗಳನ್ನು ಸಹಿಸಲಾಗಿದೆ ತವರು ಮನೆಗೆ ಬಂದ ತನ್ನ ಮಗಳು ದುಃಖದ ವಿಷಯವನ್ನು ಅಳುತ್ತಲೇ ಹೇಳಿದ್ದಾನೆ. ಸುಜಾತಳ ಇಂತಹ ಉದಾಹರಣೆಗಳು ಸಗರನಾಡಿನಲ್ಲಿ ಸಾಕಷ್ಟು ಸಿಗುತ್ತವೆ ಎಂದು ಹೇಳಬಹುದು.

ವಿಚ್ಛೇದನವು ಮಹಿಳೆಯರ ಬಾಳಿಗೆ ಒಂದು ದೊಡ್ಡ ಕಂಠಕವಿದ್ದಂತೆ ವಿಚ್ಛೇದನ ಪಡೆದ ಮಹಿಳೆಯರು ಸಮಾಜದ ಕೆಂಗಣ್ಣಿಗೆ ಗುರಿಯಾಗಿ ಅವಳ ಜೀವನ ನರಕವಾಗುತ್ತಿದೆ. ಅದೇ ರೀತಿ ಬಸವಿ ಪದ್ಧತಿ ಮತ್ತು ಘೋಶ ಪದ್ಧತಿಯು ಕೆಲವು ಬೇಡ ಮಹಿಳೆಯರ ಜೀವನವನ್ನು ನರಕಮಾಡಿದೆ. ಇವುಗಳನ್ನು ಸಾಮಾಜಿಕ ಸಮಸ್ಯೆ ಎನ್ನಬಹುದು.

ಸಮಸ್ಯೆ ಎಂದರೆ, ಯಾವುದೇ ತೊಂದರೆಯು ನಿರಂತರವಾಗಿ ಕಾಡುತ್ತಿದ್ದು ಅನಿವಾರ್ಯವಾಗಿ ಅನುಭವಿಸಬೇಕಾಗಿದೆ. ಏನೋ ಎನ್ನುವಂತಿದ್ದರೆ ಅವನ್ನು 'ಸಮಸ್ಯೆ' ಎಂದು ಕರೆಯುತ್ತಿವೆ. ಹಾಗೆ ಸಾಮಾಜಿಕ

ಸಮಸ್ಯೆ ಎಂದರೆ ಹಲವು ವ್ಯಕ್ತಿಗಳಿಗೆ ಏಕಕಾಲದಲ್ಲಿ ಏಕಾ ಪ್ರಕಾರವಾಗಿ ಕಂಡುಬರುತ್ತಿರುವ ಸಮಸ್ಯೆಗಳನ್ನು, ಹಾಗೂ ಅನೇಕ ಸದಸ್ಯರಿಗೆ ಇಷ್ಟವಿಲ್ಲದೆ ಇಲ್ಲವೇ ಅಗಾಷ್ಟೆ ಕ್ಷಣಿಯವಾದ ನಡತೆಯ ನಮೂನೆಗಳು ಮತ್ತು ಸ್ಥಿತಿಯನ್ನು ಸಾಮಾಜಿಕ ಸಮಸ್ಯೆಗಳು ಎನ್ನುತ್ತೇವೆ. ಮುಖ್ಯವಾಗಿ ಸಗರನಾಡಿನ ಬೇಡ ಮಹಿಳೆಯರಿಗೆ ಕಾಡುತ್ತಿರುವ ಪ್ರಮುಖ ಸಾಮಾಜಿಕ ಸಮಸ್ಯೆಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳು**

೧. **ಘೋಶಾ ಪದ್ಧತಿಯ ಸಮಸ್ಯೆ :** ಸಗರನಾಡಿನ ಗೌರವಾನ್ವಿತ ಬೇಡ ಮಹಿಳೆರಿಗೆ ಈ ಘೋಶಾ ಪದ್ಧತಿ ಒಂದು ಸಮಸ್ಯೆಯಾಗಿ ಕಾಡುತ್ತಿದೆ. ಮುಸ್ಲಿಂಮರ ಪರದಾ ಪದ್ಧತಿಯನ್ನು ಅನುಕರಣೆ ಮಾಡಿದಂತೆ ಬೇಡ ಮಹಿಳೆಯರು ಕೂಡಾ ಇದೆ ತರಹದ ಪದ್ಧತಿಯನ್ನು ಅನುಕರಣೆ ಮಾಡುತ್ತಾರೆ. ಆದರೆ ಘೋಶ ಪದ್ಧತಿಗೂ, ಪರದ ಪದ್ಧತಿಗೂ ಸ್ವಲ್ಪ ವ್ಯತ್ಯಾಸವಿದೆ. ಮುಸ್ಲಿಂಮರ ಪರದಾ ಪದ್ಧತಿಗೆ ಒಂದು ನಿರ್ದಿಷ್ಟವಾದ ವಸ್ತುವಿದೆ. ಆದರೆ ಘೋಶ ಪದ್ಧತಿಯಲ್ಲಿ ನಿರ್ದಿಷ್ಟವಾದ ವಸ್ತುವಿಲ್ಲ. ಹಿಂದೂ ಸಾಂಪ್ರದಾಯದಂತೆ ಸೀರೆಗಳನ್ನು ಧರಿಸಿ ಸೆರಗು ಮುಚ್ಚಿಕೊಳ್ಳುತ್ತಾರೆ. ಅದೇ ರೀತಿಯಾಗಿ ಇವರು ಹೊರಗಡೆ ಕಾಣುವಂತಿಲ್ಲ ಬೇಡ ಸಮುದಾಯದಲ್ಲಿ ಸಾಮಾನ್ಯವಾಗಿ ಪುರುಷನದೇ ಅಧಿಕಾರವಿರುವುದರಿಂದ ಅವರ ಹೆಣ್ಣುಮಕ್ಕಳನ್ನು ಈ ಸಮಸ್ಯೆಯ ಸುಳಿಗೆ ಸಿಲುಕಿಸಿ ಹೊರಬಾರದಂತೆ ನೋಡಿಕೊಳ್ಳುತ್ತಿದ್ದಾರೆ. ಈ ಸಮುದಾಯದಲ್ಲಿ ಘೋಶಾ ಪದ್ಧತಿ ಎನ್ನುವುದು ಗೌರವ ಸೂಚಕವಾಗಿದೆ.

ಬೇಡ ಸಮುದಾಯದಲ್ಲಿ ಯಾರು ಘೋಶಾ ಪದ್ದತಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೋ ಅವರ ಮನೆತನ ದೊಡ್ಡದು ಗೌರವ ಸ್ಥಾನದ್ದು, ಎಂಬ ಭಾವನೆ ಅವರಲ್ಲಿದೆ. ಅಂತೆಯೇ ಸುರಪುರದ ಕೆಲವು ಗೌರವಾನ್ವಿತ ಬೇಡ ಕುಟುಂಬಗಳಲ್ಲಿ ಈ ಪದ್ಧತಿ ಇನ್ನು ಆಚರಣೆಯಲ್ಲಿದೆಯಾದರೂ ಇತ್ತೀಚಿನ ದಿನಗಳಲ್ಲಿ ಇದು ಸ್ವಲ್ಪ ಮಟ್ಟಿಗೆ ಸಡಿಲವಾಗಿದೆ ಎಂದು ಹೇಳಬಹುದು. ಈ ಹಿಂದೆ ಬೇಡರು ತಮ್ಮ ಮಹಿಳೆಯರನ್ನು ಬೇರೆ ಊರಿಗೆ ಕರೆದುಕೊಂಡು ಹೋಗುವುದಿದ್ದರೆ ರಿಕ್ಷಾ ಮತ್ತು ಬಸ್ಸುಗಳಿಗೆ ಅಡ್ಡ ಪರದೆಯನ್ನು ಕಟ್ಟುತ್ತಿದ್ದರು ಎಂಬುದನ್ನು ಈ ಸಮುದಾಯದ ಹಿರಿಯರಿಂದ ತಿಳಿದುಕೊಳ್ಳಲಾಗಿದೆ. ಏಕೆಂದರೆ ಪರಪುರುಷರು ತಮ್ಮ ಮಹಿಳೆಯರನ್ನು ಕಣ್ಣೆತ್ತಿ ನೋಡಬಾರದು. ಹಾಗೂ ತಲೆ ತಗ್ಗಿಸಿ ಗೌರವವನ್ನು ಕೊಡಬೇಕು. ಎಂಬ ಕಟ್ಟುನಿಟ್ಟಿನ ನಿರ್ಬಂಧ ಇತ್ತು ಎಂದು ಹೇಳಲಾಗಿದೆ. ಈ ಒಂದು ಪದ್ಧತಿಯನ್ನು ಈ ಸಮುದಾಯದ ಕೆಲವು ಗೌರವಾನ್ವಿತ ಬೇಡ ಕುಟುಂಬಗಳು ಇನ್ನೂ ಸಹ ಆಚರಣೆ ಮಾಡಿಕೊಂಡು ಬರುತ್ತಿವೆ. ಆದರೆ ಮೊದಲಿನಷ್ಟು ಕಟ್ಟುನಿಟ್ಟಿನ ನಿರ್ಬಂಧ ಈಗಿಲ್ಲದಾಗಿದೆ ಎಂಬುವುದೇ ಒಂದು ಸಂತೋಷದ ವಿಷಯ. ಆದರೆ ಶಹಾಪೂರ, ಜೇವರ್ಗಿ ತಾಲೂಕುಗಳಲ್ಲಿ ಈ ಪದ್ಧತಿ ಹೆಚ್ಚಾಗಿ ಕಂಡುಬರುವುದಿಲ್ಲ. ಅಲ್ಲಿನ ಬೇಡ ಸ್ತ್ರೀಯರು ಎಲ್ಲಾ

ಜನಾಂಗದ ಸ್ತ್ರೀಯರಂತೆ ಸಾಮಾನ್ಯವಾಗಿ ಹೊರಗಡೆ ತಿರುಗಾಡಬಹುದು. ವ್ಯಾಪಾರ, ವ್ಯವಹಾರ, ಮಾಡಬಹುದು. ಚಲನಚಿತ್ರ ಮಂದಿರಕ್ಕೆ ಹೋಗಿ ಮನರಂಜನೆಯನ್ನು ಪಡೆಯಬಹುದು. ಒಂದು ಊರಿನಿಂದ ಇನ್ನೊಂದು ಊರಿಗೆ ಯಾವುದೇ ಅಭ್ಯಂತರವಿಲ್ಲದೆ ಪ್ರಯಾಣ ಮಾಡಬಹುದು. ಬೇಡ ಸಮುದಾಯದ ಮಹಿಳೆಯರಿಗೆ ಈ ಪದ್ಧತಿ ಉಸಿರು ಕಟ್ಟಿಸುವಂತಹದ್ದು ಯಾರ ಮುಂದೆಯು ಹೇಳಿಕೊಳ್ಳಲಾಗದೆ ಮನಸ್ಸಿನಲ್ಲಿಯೇ ಕೊರಗುತ್ತಾರೆ. ಆದರೆ ಪ್ರಸ್ತುತ ದಿನಮಾನಗಳು ಆಧುನೀಕರಣದ ಪ್ರಭಾವದಿಂದ ಈ ಪದ್ಧತಿ ನಶಿಸುತ್ತಿದೆ ಎಂಬುದು ಸಂತೋಷದ ವಿಷಯ.

**೫. ಬಾಲ್ಯ ವಿವಾಹ ಪದ್ದತಿಯ ಸಮಸ್ಯೆ**

ಅಪ್ರಾಪ್ತ ವಯಸ್ಸಿನ ಮಕ್ಕಳಿಗೆ ವಿವಾಹ ಮಾಡಿಕೊಡುವುದಕ್ಕೆ ಬಾಲ್ಯವಿವಾಹ ಪದ್ದತಿ ಎಂದು ಕರೆಯುತ್ತಾರೆ. ಸಗರನಾಡಿನ ಬೇಡ ಸಮುದಾಯಗಳಲ್ಲಿ ಅಥವಾ ಕುಟುಂಬಗಳಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಿಗೆ ಮದುವೆ ಮಾಡಿಕೊಡುವ ಸಂಪ್ರದಾಯ ಇನ್ನೂ ಕೆಲವು ಕುಟುಂಬಗಳಲ್ಲಿ ಇದೆ. ಎಂದು ಹೇಳಿದರೆ ತಪ್ಪಾಗಲಾರದು ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ತೊಟ್ಟಿಲಿನಲ್ಲಿಯೇ ತಾಳಿಕಟ್ಟಿಸಿದ ಬೇಡ ಕುಟುಂಬಗಳು ಸಗರ ನಾಡಿನಲ್ಲಿ ಸಾಕಷ್ಟು ಸಿಗುತ್ತವೆ. ಇದರಿಂದ ತಮ್ಮ ಹೆಣ್ಣು ಮಕ್ಕಳಿಗೆ ದೈಹಿಕ ಸಮಸ್ಯೆಗಳು ಕಾಡುತ್ತಿವೆ. ಎಂಬ ಸಾಮಾನ್ಯ ಪ್ರಜ್ಞೆಯೂ ಸಹ ಇವರಿಗೆ ಇಲ್ಲವಾಗಿದೆ. ಅದೇ ರೀತಿಯಾಗಿ ಬಾಲ್ಯ ವಿವಾಹ ಮಾಡಿಕೊಂಡ ಎಷ್ಟೋ ಮಹಿಳೆಯರು ವಿಧವೆಯರಾಗಿ ಕಣ್ಣೀರು ಸುರಿಸುತ್ತಿದ್ದಾರೆ. ಈ ಸಮುದಾಯದಲ್ಲಿ ಈ ಪದ್ದತಿ ಅಸ್ತಿತ್ವಕ್ಕೆ ಬರಲು ಕಾರಣ ಮುಸ್ಲಿಂ ರಾಜರುಗಳ ದಬ್ಬಾಳಿಕೆ, ಅತ್ಯಾಚಾರ, ದೌರ್ಜನ್ಯವೇ ಕಾರಣ ಎಂದು ಹೇಳಬಹುದು. ಈ ಪದ್ಧತಿ ಹೆಣ್ಣು ಮಕ್ಕಳ ಮೇಲೆ ಕೆಟ್ಟ ಪರಿಣಾಮ ಬಿರುತ್ತಿತ್ತು. ಈ ಹಿಂದೆ ಸಗರನಾಡು ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿತ್ತು. ಅಂದು ಮುಸ್ಲಿಂ ರಾಜಕಾರರ ದಬ್ಬಾಳಿಕೆ ಹೆಚ್ಚಾಗಿದ್ದರಿಂದ ಎಲ್ಲಿ ತಮ್ಮ ಹೆಣ್ಣು ಮಕ್ಕಳನ್ನು ಅಪಹರಣ ಮಾಡಿ ಮತಾಂತರ ಮಾಡುತ್ತಾರೋ ಎಂಬ ಭಯದಿಂದ ಕನ್ಯಾ ಪಿತೃಗಳು ತಮ್ಮ ಹೆಣ್ಣು ಮಕ್ಕಳಿಗೆ ಅವರು ಇನ್ನು ಬಾಲ್ಯಾವಸ್ಥೆಯಲ್ಲಿರುವಾಗಲೇ ವಿವಾಹ ಮಾಡುವುದು ಅನಿವಾರ್ಯವಾಗಿತ್ತು. ಅದೇ ರೀತಿಯಾಗಿ ಬಡ ಬೇಡ ಕುಟುಂಬಗಳು ಮದುವೆ ಖರ್ಚು ವೆಚ್ಚಗಳು ಕಡಿಮೆಯಾಗುತ್ತವೆ ಎಂಬ ಉದ್ದೇಶದಿಂದ ಮದುವೆ ಮಾಡಿಬಿಡುತ್ತಿದ್ದರು. ಇದರಿಂದ ಹೆಣ್ಣು ಮಕ್ಕಳ ಮೇಲೆ ಅವರು ಅಪ್ರಾಪ್ತ ವಯಸ್ಸಿನಲ್ಲಿದ್ದಾಗಲೇ ಕೌಟುಂಬಿಕ ಹೊರೆಯನ್ನು ಹೊರಿಸುತ್ತಿದ್ದರು. ಮಕ್ಕಳನ್ನು ಹೆರುವ ಸಾಕುವ ಹೊಣೆಯನ್ನು ನಿಭಾಯಿಸಬೇಕಾಗಿ ಬರುವುದರಿಂದ ಜರ್ಜರಿತರಾಗುತ್ತಿದ್ದರು. ಅವರ ಆರೋಗ್ಯ ಹದಗೆಡತೊಡಗಿತು ಅವರ ದೈಹಿಕ ದುರ್ಬಲತೆಯು ಗಂಡಂದಿರನ್ನು ಲೈಂಗಿಕ ಸುಖಕ್ಕಾಗಿ ವೈಶ್ಯೆಯರತ್ತ ನೂಕುವಂತೆಯು ಮಾಡಿತು. ಇದರ ಪರಿಣಾಮ ಚಿಕ್ಕ ವಯಸ್ಸಿನಲ್ಲಿ ಗಂಡಂದಿರನ್ನು ಕಳೆದುಕೊಂಡು ಬಾಲ ವಿದವೆಯರಾಗಿ ನರಕಯಾತನೆಯನ್ನು ಅನುಭವಿಸುವಂತಹ ಪರಿಸ್ಥಿತಿ ಬಂದೊದಗುತ್ತಿತ್ತು.

೩. ವರದಕ್ಷಿಣೆ ಸಮಸ್ಯೆ

ಸಾಮಾನ್ಯವಾಗಿ ವಿವಾಹವ ಸಂದರ್ಭದಲ್ಲಿ ವರನಿಗೆ ವಧುವಿನ ಕಡೆಯವರಿಂದ ಕೊಡಲಾಗುವ ಹಣ, ಆಸ್ತಿ ಹಾಗೂ ವಸ್ತುಗಳನ್ನು ವರದಕ್ಷಿಣೆ ಎಂಬುದಾಗಿ ಕರೆಯುತ್ತೇವೆ. ವರದಕ್ಷಿಣೆಯು ಮೊದಲು ಬಹಳ ಮಟ್ಟಿಗೆ ಮೇಲುಜಾತಿಗಳವರಲ್ಲಿ ಅಂಕುರಿಸಿ ಅನಂತರ ಕೆಳಜಾತಿಗಳವರಿಗೂ ವ್ಯಾಪಿಸಿ ಈಗ ಭಾರತೀಯ ಹಿಂದೂ ಸಮಾಜದ ಎಲ್ಲಾ ಭಾಗ ವಿಭಾಗಗಳಲ್ಲಿ ಜಾತಿ-ಉಪಜಾತಿ ಸಮುದಾಯಗಳಲ್ಲಿ ಕಂಡುಬರುತ್ತಿರುವ ಒಂದು ಪ್ರಮುಖ ಸಾಮಾಜಿಕ ಪಿಡುಗಾಗಿರುವುದು ವರದಕ್ಷಿಣೆಯು ಮಹಿಳೆಯರ ಸಾಮಾಜಿಕ ಸಮಸ್ಯೆಗಳಲ್ಲಿ ಒಂದಾಗಿದೆ. ಇದು ದಿನೆ ದಿನೆ ಕ್ಷೀಣಿಸುವುದರ ಬದಲು ಬೃಹತ್ತಾಗಿ ಬೆಳೆಯುತ್ತಿರುವ ಪಿಡುಗಾಗಿರುವುದು ಒಂದು ದುರಂತ ಇದು ಸಗರನಾಡಿನ ಬಡ ಬೇಡ ಮಹಿಳೆಯರಿಗೆ ಒಂದು ಕಂಟಕವಾಗಿ ಮಾರ್ಪಟ್ಟಿದೆ.

ವರನು ಎಲ್ಲಿಯವರೆಗೆ ಓದಿದ್ದಾನೆ ಯಾವ ಉದ್ಯೋಗದಲ್ಲಿದ್ದಾನೆ ಅವನ ರೂಪ ಬಣ್ಣ, ಗುಣ ಮನೆತನದ ಘನತೆ ಗೌರವಗಳು ಲೆಕ್ಕಚಾರಕ್ಕೆ ಬಂದು ವರದಕ್ಷಿಣೆಯ ಪ್ರಮಾಣವನ್ನು ನಿರ್ಧರಿಸಲು ಇವು ಬಹಳ ಮಟ್ಟಿಗೆ ನೆರವಾಗುತ್ತಿವೆ. ವರದಕ್ಷಿಣೆಯು ಸಗರನಾಡಿನ ಬೇಡ ಮಹಿಳೆಯರಿಗೆ ಕಾಡುತ್ತಿರುವ ಒಂದು ಪ್ರಮುಖ ಸಮಸ್ಯೆಯಾಗಿದೆ. ಇದರಿಂದ ಕೆಡಕುಗಳಾಗುತ್ತಿವೆ ದುಷ್ಪರಿಣಾಮಗಳಾಗುತ್ತಿವೆ. ವರದಕ್ಷಿಣೆ ರಾಕ್ಷಸಿ ಪಿಡುಗಾಗಿರುವುದರಿಂದ ಹೆಣ್ಣುಮಕ್ಕಳ ಜನನ ಶಾಪವೆನಿಸಿದೆ. ಬೇಡ ಸಮುದಾಯದ ಕುಟುಂಬಗಳಲ್ಲಿ ಅನೇಕ ಮಂದಿ ಕನ್ನೆಯರು ಅವಿವಾಹಿತರಾಗಿಯೇ ಉಳಿದಿದ್ದಾರೆ. ಇದರಿಂದ ಹೆಣ್ಣು ಮಕ್ಕಳ ತಂದೆ-ತಾಯಿಯರು ಮಮ್ಮಲ ಮರುಗುತ್ತಿದ್ದಾರೆ. ಒಂದು ವೇಳೆ ವಿವಾಹವಾದರೂ ಸಹ ಶಾಂತಿ ಸಮಾದಾನ ನೆಮ್ಮದಿ ಸಂತೃಪ್ತಿಯ ಜೀವನ ಸಿಗದೆ ಪತಿಯ ಅತ್ತೆಮಾವಂದಿರ, ಭಾವ, ಮೈದುನರ, ನಾದಿನಿಯರ, ಕಿರುಕುಳಕ್ಕೆ ಹಿಂಸೆಗೆ ಚಿತ್ರ ಹಿಂಸೆಗೆ ಕೊಲೆ ಶೋಷಣೆಗೆ ಗುರಿಯಾಗುತ್ತಿದ್ದಾರೆ ಕೈಯಾರ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ.

ಉದಾ: ಸುರಪುರ ಪಟ್ಟಣದಲ್ಲಿ ಗೌರವಾನ್ವಿತ ಬೇಡ ಕುಟುಂಬದ ಹೆಣ್ಣು ಗುಡೆಗುಂಟಿ ಬೇಡ ವರನಿಗೆ ಮದುವೆ ಮಾಡಿಕೊಟ್ಟು ೨-೩ ವರ್ಷಗಳಲ್ಲಿ ಗಂಡನಿಂದ ಅತ್ತೆಯಿಂದ ಹೆಚ್ಚಿನ ವರದಕ್ಷಿಣೆ ಕಿರುಕುಳ ತಾಳಲಾರದೆ ಆ ಮೂಲಕ ಹೆಣ್ಣು ಆತ್ಮಹತ್ಯೆ ಮಾಡಿಕೊಂಡಿದ್ದಾಳೆ ಇಂತಹ ಉದಾಹರಣೆಗಳು ಸಗರನಾಡಿನ ಸುತ್ತಾ ಮುತ್ತ ಸಾಕಷ್ಟು ಸಿಗುತ್ತವೆ.

ಬಡ ಬೇಡ ಕುಟುಂಬದ ಮಹಿಳೆಯರಿಗೆ ವರದಕ್ಷಿಣೆಯು ಜೀವ ತೆಗೆಯುವ ದುರ್ವ್ಯವಸ್ಥೆಯಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಜೀವಕ್ಕೆ ಮಾರಕವಾಗುವ ವರದಕ್ಷಿಣೆಯನ್ನು ಹೋಗಲಾಡಿಸಲು ಕಾನೂನು ಕ್ರಮದ ಜೊತೆಗೆ ಜನಜಾಗೃತಿಯನ್ನಾಧರಿಸುವ ಸಾಮಾಜಿಕ ಕ್ರಮಗಳು ಅತ್ಯಗತ್ಯವಾಗಿವೆ. ಅಲ್ಲಲ್ಲಿ ಒಬ್ಬರಿಂದೊಬ್ಬರು ವರದಕ್ಷಿಣೆಯ ವಿರುದ್ಧ ಧ್ವನಿ ಎತ್ತುವುದರ ಜೊತೆಗೆ ಚಳವಳಿ ಸಾಮೂಹಿಕ ಜನಜಾಗೃತಿ

ಆಂದೋಲನ, ಸಂಕಲ್ಪ, ಪ್ರತಿಜ್ಞೆ, ಹಾಗೂ ಅನುಷ್ಠಾನ ಅಪೇಕ್ಷಣೀಯವಾಗಿದೆ. ಯುವಕ ಯುವಕಿಯರು ವರದಕ್ಷಿಣೆಯನ್ನು ತೆಗೆದುಕೊಳ್ಳಬಾರದು ಎಂಬ ದೃಢ ಸಂಕಲ್ಪ ಮಾಡಬೇಕಾಗಿದೆ. ಆದರೆ ಇದು ಒಮ್ಮಿಂದೊಮ್ಮೆಲೆ ಆಗುವ ಕಾರ್ಯವಾಗಿರದೆ ಕಾಲಗತಿಯಲ್ಲಿ ಗುರಿಮುಟ್ಟಬಹುದಾದ ಕೆಲಸವಾಗಿದೆ.

**೪. ಬಸವಿ ಪದ್ಧತಿಯ ಸಮಸ್ಯೆ**

ಬಸವಿಯರು ಎಂದರೆ ಒಂದರ್ಥದಲ್ಲಿ ವೇಶ್ಯೆಯರು ಈ ಹಿಂದೆ ಸಗರನಾಡಿನ ಬೇಡ ಸಮುದಾಯಗಳಲ್ಲಿಯು ಸಹ ಕೆಳಮಟ್ಟದ ಕುಟುಂಬಗಳಲ್ಲಿ ಹೆಣ್ಣನ್ನು ಬಸವಿ ಬಿಡುವ ಸಂಪ್ರದಾಯವಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ. ಸುರಪುರ ಸಂಸ್ಥಾನದಲ್ಲಿ ಬೇಡ ಮಹಿಳೆಯರು ದಾಸಿಯರಾಗಿ, ನೃತ್ಯಗಾರ್ತಿಯರಾಗಿ (ಪಾತ್ರದವರು) ಸೇವೆಮಾಡುತ್ತಿದ್ದರು. ಇವರು ಕಾಲಾನಂತರ ಬಡತನದ ಸುಳಿಗೆ ಸಿಕ್ಕು ಕೆಲವು ಮಹಿಳೆಯರು ಬಸವಿಯರಾಗಿ ಬದಲಾವಣೆ ಹೊಂದಿದ್ದರು ಸಗರನಾಡಿನಲ್ಲಿ ಇವರ ಸ್ಥಾನಮಾನ ಕೀಳುಮಟ್ಟದ್ದಾಗಿದ್ದು ಜನರಿಂದ ಕಡೆಗಣಿಸಲ್ಪಟ್ಟ ಬೇಡ ಸಮುದಾಯದಿಂದ ಪ್ರತ್ಯೇಕವಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬಸವಿ ಮನೆತನದಲ್ಲಿ ಬೆಳೆದ ಬೇಡ ಹೆಣ್ಣು ಮಕ್ಕಳು ಮದುವೆಯಾಗದೆ ಹಾಗಾಗಿಯೇ ಉಳಿದಿದ್ದಾರೆ ಪ್ರಸ್ತುತ ದಿನಮಾನಗಳಲ್ಲಿ ಈ ವಂಶದಲ್ಲಿ ಬೆಳೆದ ವ್ಯಕ್ತಿಗಳು ಒಳ್ಳೆಯ ಶಿಕ್ಷಣವನ್ನು ಪಡೆದು ಸಮಾಜದಲ್ಲಿ ತಮ್ಮ ಸ್ಥಾನಮಾನಗಳನ್ನು ಹೆಚ್ಚಿಸಿಕೊಂಡು ಈ ಅನಿಷ್ಮ ಪದ್ದತಿಯನ್ನು ದೂರವಿಟ್ಟಿದ್ದಾರೆ. ಈಗ ಈ ಕೀಳು ಪದ್ದತಿ ಬೇಡ ಸಮುದಾಯದಿಂದ ನಶಿಸಿ ಹೋಗಿದ್ದು ಸಂತೋಷದ ಸಂಗತಿಯಾಗಿದೆ. ಬಸವಿಯರು ಸಹ ತಾವು ಕೂಡ ಸಮಾಜದಲ್ಲಿ ಎಲ್ಲರ ಜೊತೆ ಚೆನ್ನಾಗಿದ್ದು ಸುಸಂಸ್ಕೃತರಾಗಿ ಜೀವನ ಸಾಗಿಸಬೇಕು ಎಂಬ ಮನೋಭಾವನೆಯನ್ನು ಮೂಢಿಸಿಕೊಂಡಿದ್ದಾರೆ.

**೫. ವಿದವಾ (ಪುನರ್) ವಿವಾಹ ಸಮಸ್ಯೆ**

ಸಗರನಾಡಿನ ಬೇಡ ಸಮುದಾಯ ತನ್ನದೇಯಾದ ಸಂಸ್ಕೃತಿ, ಪರಂಪರೆ, ಗೌರವವನ್ನು ಕಪಾಡಿಕೊಂಡು ಬಂದಿರುವುದರಿಂದ ಮಹಿಳೆಯರು ಒಂದು ಸಲ ಮದುವೆಯಾದರೆ ಪತಿಯು ಮರಣವನ್ನಪ್ಪಿದರೆ ಅವರು ಸುಲಭವಾಗಿ ಇನ್ನೊಂದು ಮದುವೆಯಾಗುವಂತಿಲ್ಲ. ಪಾಲಿಗೆ ಬಂದಿದ್ದು ಪಂಚಾಮೃತ, ಇದು ಹಣೆಯ ಬರಹ ಎಂದು ತಿಳಿದುಕೊಂಡು ಒಂಟಿ ಜೀವನವನ್ನು ಸಾಗಿಸಬೇಕಾಗುತ್ತದೆ. ಗಂಡಂದಿರನ್ನು ಕಳೆದುಕೊಂಡು ಎಷ್ಟೋ ವಿದುವೆಯರು ಇಂದು ಕರಾಳ ದಿನಗಳನ್ನು ಕಳೆಯುತ್ತಿದ್ದಾರೆ. ವಿಧುವೆಯನ್ನು ಒಳ್ಳೆಯ ಕಲ್ಯಾಣ ಕಾರ್ಯಕ್ರಮಗಳಿಗೆ ಕರಿಯುವುದಿಲ್ಲ. ಒಂದು ವೇಳೆ ಕರೆದರೆ ಕೆಡಕಾಗುತ್ತದೆ ಎಂಬ ಮೂಢನಂಬಿಕೆಯ ಭಾವನೆ ಬೇಡ ಸಮುದಾಯದಲ್ಲಿ ಇನ್ನು ಇದೆ. ಎಂದು ಹೇಳಿದ್ದರೆ ತಪ್ಪಾಗಲಾರದು. ಇದರಿಂದ ವಿದುವೆಯರ ಮನಸ್ಸು ಸಾದ ಮಮ್ಮಲ ಮರಗುತ್ತದೆ. ನಾವು ಅಪಶಕುನಗಳು ನಮ್ಮಿಂದ ಕೆಟ್ಟದ್ದಾಗುತ್ತದೆ. ನಮ್ಮನ್ನು ಕೀಳಾಗಿ ಕಾಣುತ್ತಾರೆ ಎಂಬ ಮಾನಸಿಕತೆಯನ್ನು ಮೂಡಿಸಿಕೊಳ್ಳುತ್ತಾರೆ. ಇದರಿಂದ ಆತ್ಮಹತ್ಯೆಗಳು

ಆಗಬಹುದಾದ ಸಾಧ್ಯತೆಯು ಇರುತ್ತದೆ, ಬೇಡ ಸಮುದಾಯದ ಕೆಲವು ಕುಟುಂಬಗಳು ಬಡತನದಿಂದ ಕೂಡಿಇರುವುದರಿಂದ ಹಾಗೂ ಅನಕ್ಷರಸ್ಥರಿಗೆ ಹೆಚ್ಚಾಗಿರುವುದರಿಂದ ಪುರುಷರು ಇಸ್ಪೀಟು, ಜೂಜು, ಕುಡಿತ, ವೇಶ್ಯೆಯರ ಸಹವಾಸ ಇಂತಹ ದುಶ್ಚಟ ಹಾಗೂ ಅನೈತಿಕ ಚಟುವಟಿಕೆಗಳಲ್ಲಿ ತೊಡಗುವುದರಿಂದ ಆರೋಗ್ಯದಲ್ಲಿ ಏರುಪೇರಾಗಿ ರೋಗರುಜಿನಗಳು ಬಂದು ಮರಣವನ್ನು ಅಪ್ಪುತ್ತಾರೆ. ಆಗ ಪತ್ನಿಯರು ವಿಧವೆಯಾರಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ.

**೬. ಬೇಡ ಸಮುದಾಯದಲ್ಲಿ ಸ್ತ್ರೀ ಭ್ರೂಣಹತ್ಯೆ**

ಸಗರನಾಡಿನ ಪುರುಷರಿಗೆ ಹೆಚ್ಚು ಪ್ರಧಾನ್ಯತೆಯನ್ನು ಕೊಡುತ್ತದೆ. ಅಂದರೆ ಪುರುಷ ಪ್ರಧಾನ ಬೇಡ ಸಮುದಾಯ ಎಂಬು ಹೇಳಿದರೆ ಸರಿಹೊಂದಿತ್ತು. ಸುರಪುರ ಸಂಸ್ಥಾನದಲ್ಲಿ ಈ ಹಿಂದೆ ಗಂಡು ಮಗು ಹುಟ್ಟಿದರೆ ಪ್ರತಿ ತಿಂಗಳು ಐದು ರೂಪಾಯಿಯನ್ನು ಕೊಟ್ಟು ಪ್ರೌಢವ್ಯವಸ್ಥೆಗೆ ಬಂದ ನಂತರ ಅವರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುತ್ತಿದ್ದರು. ಎಂಬ ಆಧಾರಗಳಿವೆ. ಅದೇ ರೀತಿಯಾಗಿ ಗಂಡು ಮಗು ಹುಟ್ಟಿದರೆ ನಮ್ಮ ವಂಶೋದ್ಧಾರಕ ಜನಿಸಿದ ಎಂಬ ಸಂತೋಷದ ಭಾವನೆ ಅವರಲ್ಲಿ ಮೂಡುತ್ತದೆ. ಈ ಸಮುದಾಯದಲ್ಲಿ ಗಂಡು ಮಗುವಿಗೆ ಕೊಟ್ಟಷ್ಟು ಬೆಲೆ ಹೆಣ್ಣು ಮಗುವಿಗೆ ಕೊಡುವುದಿಲ್ಲ. ಈ ಲಿಂಗತಾರತಮ್ಯ ಭಾವನೆ ಇನ್ನು ಇರುವುದರಿಂದ ಮತ್ತು ಅತ್ಯಂತ ಆಧುನಿಕ ವೈದ್ಯಕೀಯ ತಂತ್ರಜ್ಞಾನ ಬೆಳೆದಿರುವುದರಿಂದ ಮಗು ತಾಯಿಯ ಗರ್ಭದಲ್ಲಿರುವಗಲೇ ಭ್ರೂಣಲಿಂಗ, ಪತ್ಯಮಾಡಿಸಿ ಹೆಣ್ಣು ಗಂಡೆಂದು ತಿಳಿದುಕೊಂಡು ಒಂದು ವೇಳೆ ಹೆಣ್ಣು ಭ್ರೂಣವಾದರೆ ಹೊಟ್ಟೆಯಲ್ಲಿಯೆ ಹತ್ಯೆಮಾಡುವುದಿರಂದ ಸ್ತ್ರೀ ಭ್ರೂಣ ಅತ್ಯೆ ಹೆಚ್ಚಾಗುತ್ತದೆ. ಇದರಿಂದ ಬೇಡ ಸಮುದಾಯದಲ್ಲಿ ಮಹಿಳೆಯರ ಸಂಖ್ಯೆ ಕಡಿಮೆಯಾಗಿದೆ.

೧೯೦೧ರಲ್ಲಿ ಪ್ರತಿ ಸಾವಿರ ಗಂಡಸರಿಗೆ ೯೭೨ ಹೆಂಗಸರಿದ್ದರು, ಇದೇ ಸಂಖ್ಯೆ ೧೯೭೧ರಲ್ಲಿ ೯೩೦ಕ್ಕೆ ಇಳಿದುಹೊಯಿತ್ತು. ೧೯೮೧ರಲ್ಲಿ ಸ್ವಲ್ಪ ಮೇಲೇರಿ ೧೯೩೬ಕ್ಕೆ ತಲುಪಿದರೆ, ಭ್ರೂಣಲಿಂಗ ಪತ್ತೆ ಕ್ಲೀನಿಕಗಳ ಆವಳಿ ೧೯೯೧ರ ವತ್ತಿಗೆ ಈ ಸಂಖ್ಯೆಯನ್ನು ೯೨೯ಕ್ಕೆ ಜಿಗಿಯಿತು. ಒಂದು ಅಂದಾಜಿನ ಪ್ರಕಾರ ಪ್ರತಿ ವರ್ಷ ೫೦ ಲಕ್ಷ ಸ್ತ್ರೀ ಭ್ರೂಣ ಹತ್ಯೆಗಳು ಜಗುರುತ್ತವೆ. ಸರಾಸರಿ ಲೆಕ್ಕದ ಪ್ರಕಾರ ಈ ಸಂಖ್ಯೆ ೨೦ ಲಕ್ಷ ಇತಂಹ ಆಗಾದ ಸಂಖ್ಯೆಯಲ್ಲಿ ಆಗುತ್ತಿರುವ ಸ್ತ್ರೀ ಭ್ರೂಣ ಹತ್ಯೆ ಸಾಮಾಜಿಕ ಅಸಮತೊಲನವನ್ನು ಮಾಡುತ್ತದೆ.

ಶಿಕ್ಷಣ, ಆರ್ಥಿಕ, ಸಾಮಾಜಿಕ, ರಾಜಕೀಯ ಈ ಎಲ್ಲಾ ರಂಗದಲ್ಲಿರುವ ಲಿಂಗತಾರತಮ್ಯ ನಿವರಣೆಯಾದಾಗ ಮಾತ್ರ ಮಹಿಳೆಯರ ಸ್ಥಾನಮಾನವನ್ನು ಉತ್ತಮ ಪಡಿಸಿಕೊಳ್ಳಬೇಕೆಂದು ಸಮಾನತೆಯ ಬುನಾದಿಯ ಮೇಲೆ ನಿಂತು ಸಮಾಜದಲ್ಲಿ ಸ್ತ್ರೀ ಭ್ರೂಣ ಹತ್ಯೆ ನನೆಡಲಾರದು (ಆಧಾರ ಗ್ರಂಥ ಮಹಿಳೆ ಮತ್ತು ಶೋಷಣೆ ಸವಾಲುಗಳು ಪು. ೪೧) ಪ್ರಸ್ತುತ ದಿನಮಾನಗಳಲ್ಲಿ ಬೇಡ ಸಮುದಾಯ ಶೈಕ್ಷಣಿಕರಣಕ್ಕೆ ಒಳಪಟ್ಟಿರುವುದರಿಂದ ಸ್ತ್ರೀ ಭ್ರೂಣ ಹತ್ಯೆ ಕಡಿಮೆಯಾಗುತ್ತದೆ.

೦-೬ ವಯೋಮಾನದ ಮಕ್ಕಳ ಮತ್ತು ಒಟ್ಟು ಜನಸಂಖ್ಯೆಯ ಲಿಂಗ ಅನುಪಾತ : ೨೦೦೧

ಕೋಷ್ಟಕ-೧

| ದೇಶ/ಪ್ರದೇಶ | ಲಿಂಗಅನುಪಾತ ಪ್ರತಿ ಸಾವಿರ ಪುರುಷರಿಗೆ ಮಹಿಳೆಯ ಸಂಖ್ಯೆ ೦-೬ ವಯೋಮಾನದ ಮಕ್ಕಳು | ಒಟ್ಟು ಜನಸಂಖ್ಯೆ |
|---|---|---|
| ಭಾರತ | ೯೨೭ | ೯೩೪ |
| ಕರ್ನಾಟಕ | ೯೪೯ | ೯೬೬ |
| ಭಾರತದಲ್ಲಿ ಕಾಣೆಯಾದ ಮಹಿಳೆಯರು | ೫೯.೫೯ ಲಕ್ಷ | ೩೫೫.೩೮ ಲಕ್ಷ |
| ಕರ್ನಾಟಕದಲ್ಲಿ ಕಾಣೆಯಾದ ಮಹಿಳೆಯರು | ೧.೭೭ ಲಕ್ಷ | ೧೦.೭೮ ಲಕ್ಷ |

ಮೂಲ :- ಸೆನ್ಸಸ್ ಆಫ್ ಇಂಡಿಯಾ ೨೧ ಸಿರಿಸ ೩೦ ಕರ್ನಾಟಕ ಪೇಪರ್ ೨ ಆಫ್ ೨೦೦೧ ಪ್ರಾವಿಷನೆಲ್ ಪ್ಯಾಪ್ಯಲೇಷ್ಯನ್ ಟೊಟಲ್ಸ್

**೭ ಶಿಕ್ಷಣದ ಕೊರತೆ**

ಸಗರನಾಡಿನ ಬೇಡ ಮಹಿಳೆಯರಷ್ಟು ಅನಕ್ಷರಸ್ಥರು ಬೇರೆ ಯಾವ ಜನಾಂಗದಲ್ಲಿಯೂ ಕಂಡುಬರುವುದಿಲ್ಲ. ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇದು ಆಶ್ಚರ್ಯಪಡುವಂತಹ ವಿಷಯವು ಹೌದು ಪ್ರಾಚೀನ ಕಾಲದಿಂದಲು ಕೊಡ ಮಹಿಳೆಯರನ್ನು ಈ ವಿಷಯದಲ್ಲಿ ಕಡೆಗಣಿಸುತ್ತಾ ಬಂದಿದ್ದಾರೆ. ಬೇಡ ಸಮುದಾಯದಲ್ಲಿ ಶಿಕ್ಷಣಕ್ಕೆ ಅಷ್ಟಾಗಿ ಒತ್ತುಕೊಡದೇ ಬೇಟೆಯಾಡುವುದು ವೃತಾ ಕಾಲಹರಣ ಮಾಡುವುದು ರಾಜಕೀಯ ಮಾಡುವುದರಲ್ಲಿ ಕಾಲಹರಣ ಮಾಡುತ್ತಾ ಬಂದಿದ್ದಾರೆ. ಇತ್ತೀಚಿನ ದಿನಮಾನಗಳಲ್ಲಿ ಶೇ ೫೦ ರಷ್ಟು ಬೇಡ ಜನಾಂಗದವರು ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ ಇಂತಹ ಒಂದು ಸಂದರ್ಭದಲ್ಲಿ ಬೇಡರು ತಮ್ಮ ಮಹಿಳೆಯರನ್ನು ಶಾಲೆ ಕಾಲೇಜು, ವಿಶ್ವವಿದ್ಯಾಲಯಕ್ಕೆ ಕಳಿಸುವುದು ತೀರಾ ಕಡಿಮೆ ಎಂದು ಹೇಳಬಹುದು. ಬೇಡ ಕುಟುಂಬದಲ್ಲಿ ಹೆಣ್ಣು ಮೈನೆರೆದರೆ ಪ್ರೌಢ ಶಿಕ್ಷಣವು ಮುಗಿದಿರುವುದಿಲ್ಲ ಅಲ್ಲಿಗೆ ಅವಳನ್ನು ಬಿಡಿಸಿ ಬಿಡುತ್ತಾರೆ ಹೆಣ್ಣು ಕಲಿತರೆ ಏನು ಪ್ರಯೋಜನ ಎಂಬ ಭಾವನೆ ಅವರ ತಂದೆ ತಾಯಿಯರದ್ದಾಗಿರುತ್ತದೆ. ಸಗರನಾಡಿನಲ್ಲಿ ಪ್ರಥಾಮಿಕ ಶಿಕ್ಷಣದಲ್ಲಿ ಬೇಡರ ಹುಡಿಗಿಯರು ತುಂಬಾ ಸಿಕ್ಕರೆ ಪ್ರೌಢ ಮತ್ತು ಕಾಲೇಜುಗಳಲ್ಲಿ ಅಷ್ಟಾಗಿ ಕಾಣುವುದಿಲ್ಲ. ಬೇಡ ಸಮುದಾಯದಲ್ಲಿ ಮಹಿಳೆ ಶೈಕ್ಷಣಿಕವಾಗಿ

ಹಿಂದುಳಿಯಲು ಕಾರಣ ಪುರುಷರ ಅಲಕ್ಷತೆ ಎನ್ನಬಹುದು. ಚಾತುವರ್ಣ ವ್ಯವಸ್ಥೆ ಹಾಗೂ ಯಜಮಾನ ಸಂಸ್ಕೃತಿ ಶತಮಾನಗಳಿಂದ ಮಹಿಳೆಯರನ್ನು ದುರ್ಬಲಗೊಳಿಸುತ್ತಾ ಬಂದಿದೆ. ಮಹಿಳೆ ಅಬಲೆ, ದುರ್ಬಲಳು ಇನ್ನೊಬ್ಬರ ರಕ್ಷಣೆಯಲ್ಲಿರಬೇಕಾದವಳು ಎಂದು ತಪ್ಪು ಪ್ರಚಾರ ಮಾಡುತ್ತಲೇ ಬಂದಿವೆ. ಮಹಿಳೆ ಕೇಡಿನಮೂಲಕ್ಕೆ ಬೋಗದ ವಸ್ತು, ಎಂದು ಹಸಿ ಸುಳ್ಳುಗಳನ್ನು ಹೇಳುತ್ತಲೆ ಬಂದಿವೆ. ಇಂತಹ ವಿಚಿತ್ರವಾದ ಪುರುಷನ ನಡವಳಿಕೆಗಳೆ ಸ್ತ್ರೀಯರು ಶಿಕ್ಷಣದಿಂದ ವಂಚಿತರಾಗಲು ಪ್ರಮುಖ ಕಾರಣವಾಗಿದೆ.

ಇಂದು ನಮ್ಮೆದುರಿಗೆ ಎರಡು ಪ್ರಕಾರದ ಶಿಕ್ಷಣ ಪದ್ದತಿಗಳಿವೆ. ಮೊದಲನೆಯದು ಶತಮಾನಗಳಿಂದ ಮುಂದುವರಿದುಕೊಂಡು ಬಂದ ನಮ್ಮದೇ ಆದ ಚತುರ್‌ವರ್ಣ ವ್ಯವಸ್ಥೆಯ ಗುರುಕುಲ ಪದ್ದತಿ, ಇನ್ನೊಂದು ಈಗ ಮೂರು ಶತಮಾನಗಳಿಂದ ತೀವ್ರಗೊಂಡಿರುವ ಆಂಗ್ಲ ಶಿಕ್ಷಣ ಪದ್ದತಿ ನಮ್ಮ ದೇಶದ ಹಿಂದಿನ ಶಿಕ್ಷಣ ಪದ್ದತಿ ವರ್ಣಾಶ್ರಮ ಶಿಕ್ಷಣ ಪದ್ಧತಿಯಾಗಿದ್ದು ಅಲ್ಲಿ ಕೇವಲ ಬ್ರಾಹ್ಮಣರಿಗೆ ಹಾಗೂ ಕ್ಷತ್ರಿಯರಿಗೆ ಮಾತ್ರ ಶಿಕ್ಷಣ ಪಡೆಯುವ ಅವಕಾಶವಿತ್ತು. ಈ ವಿಷಯದಲ್ಲಿ ಮಹಿಳೆಯರಂತೂ ತುಂಬಾ ಚಿಂತಾಜನಕ ಸ್ಥಿತಿಯಾಗಿತ್ತು. ಆಗಿನ ಕಾಲದ ಶಿಕ್ಷಣವೆಂದರೆ ವೇದಾಧ್ಯಯನವೇ ಆಗಿತ್ತು. ಲೋಪಮುದ್ರೆ, ಘೋಷಾ, ವಿಶ್ವಮಾ, ಸುಲಭಾ, ಗಾಗಿರ, ಮೈತ್ರೇಯಿ, ಈ ಮೊದಲಾದ ಮಹಿಳೆಯರು ವೇದ ಅಧ್ಯಯನ ಮಾಡಿದ್ದರೆಂದು ತಿಳಿದುಬರುತ್ತಿದೆ. ಮುಂದೆ ಸ್ಮತಿಗಳ ಕಾಲಕ್ಕೆ ಲಿಂಗ ಬೇದ ನೀತಿ ಹೆಚ್ಚುತ್ತಾ ಹೊಯಿತು ತದನಂತರ ಮುಸ್ಲಿಂಮರ ಆಳ್ವಿಕೆಯಲ್ಲಿ ಸ್ತ್ರೀ ಶಿಕ್ಷಣ ಕುಂಠಿತಗೊಂಡಿತ್ತು ಆಗಿನಿಂದ ಇಂದಿನವರೆಗೆ ಶಿಕ್ಷಣದಲ್ಲಿ ಮಹಿಳೆಯರ ಸಂಖ್ಯೆ ಕಡಿಮೆಯೆ ಇದೆ. ಸಗರ ನಾಡಿನ ಬೇಡ ಸಮುದಾಯ ಹಿಂದೂ ಧರ್ಮ ಅವಲಂಭಿಗಳಾದ್ದರಿಂದ ಸ್ತ್ರೀ ಸ್ವಾತಂತ್ರ್ಯ ಮಹತಿ (ಅಂದರೆ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂದರ್ಥ ಎಂಬ ಮನೋಭಾವದಂತೆ ನಡೆದುಕೊಳ್ಳುತ್ತಾ ಬಂದಿದ್ದಾರೆ. ಸಾಮಾನ್ಯ ಬೇಡ ಕುಟುಂಬದಲ್ಲಿ ಮಹಿಳೆಯರು ಶಾಲಾ ಕಾಲೇಜು ವಿಶ್ವವಿದ್ಯಾಲಯಗಳಿಗೆ ಕಳುಸಿದರೆ ಗೌರವಾನ್ವಿತ ಬೇಡ ಕುಟುಂಬಗಳಲ್ಲಿ ಮಹಿಳೆಯರಿಗೆ ಶಿಕ್ಷಣವನ್ನು ಕೊಡಿಸುವಲ್ಲಿ ಮಹಿಳೆಯರಿಗೆ ಕಲಿಯುವ ಆಸೆ ಇದ್ದರೂ ಕೂಡ ಪುರುಷರು ನಿರಾಸೆಮಾಡುತ್ತಾರೆ. ಕಾರಣ ಗೌರವಾನ್ವಿತ ಬೇಡ ಕುಟುಂಬಗಳಲ್ಲಿ ಘೋಷಾ ಪದ್ದತಿ ಇರುವುದರಿಂದ ಹೆಣ್ಣು ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳಿಸುವುದಿಲ್ಲ. ಅದರಲ್ಲಿಯೂ ಸುರಪುರದಲ್ಲಿ ಶಿಕ್ಷಣವನ್ನು ಕಲಿತಂತೆ ಬೇಡ ಮಹಿಳೆಯರು ಸಂಖ್ಯೆ ಕಡಿಮೆ ಇದ್ದಾರೆ. ಶಹಾಪುರ ಜೇವರ್ಗಿ ತಾಲ್ಲೂಕುಗಳಲ್ಲಿ ಶಿಕ್ಷಣ ಪಡೆದ ಸ್ತ್ರೀಯು ಸಂಖ್ಯೆ ಹೆಚ್ಚಿಗೆ ಇದೆ ಎನ್ನಬಹುದು.

ಶಿಕ್ಷಣವೆಂದರೆ ಕೇವಲ ಅಕ್ಷರ ಕಲಿಯುವದಲ್ಲ ಶಿಕ್ಷಣಕ್ಕೂ ಸಂಸ್ಕೃತಿಗೂ ಬದಲಾವಣೆಗೂ ಅವಿನಾಭಾವ ಸಂಬಂಧವಿದೆ. ಭಾರತದ ಅನೇಕ ಬುಡಕಟ್ಟುಗಳಲ್ಲಿ ಅಕ್ಷರ ಕಲಿಸುವ ಶಿಕ್ಷಣ ಇರಲಿಕ್ಕಿಲ್ಲ. ಆದರೆ ಬದುಕನ್ನು ರೂಪಿಸಿಕೊಳ್ಳುವ ಶಿಕ್ಷಣವಿದೆ. ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಶಿಕ್ಷಣವಿದೆ ಆದುದರಿಂದ ಬೇಡ ಮಹಿಳೆಯರು ಅನಕ್ಷರಸ್ಥರೆಂದು ಕರೆಯಬಹುದೇ ವಿನಹ ಅಶಿಕ್ಷಿತರೆಂದು ಅಸಂಸ್ಕೃತರೆಂದು ಕರೆಯಲಾಗದು.

'ನೋಡಿ ತಿಳಿ ಮಾಡಿಕಲಿ' ಇದು ಸಗರನಾಡಿನ ಬೇಡ ಸಮುದಾಯದ ಶಿಕ್ಷಣ ಪದ್ದಿತಿಯಾಗಿದೆ. ಬೇಡ ಮಹಿಳೆಯರನ್ನು ಶಾಲೆಗೆ ಕಳಿಸದೆ ಮನೆಯಲ್ಲಿಯೂ ನೈತಿಕ ಶಿಕ್ಷಣವನ್ನು ನೀಡುತ್ತಿದ್ದಾರೆ. ಎಂದು ಹೇಳಬಹುದು. ಕೌಟುಂಬಿಕ ಶಿಕ್ಷಣದ ಜೊತೆ ಜೊತೆಗೆ ಬೇಡ ಪುರುಷರು ತಮ್ಮ ಮಹಿಳೆಯರಿಗೆ ಸಾರ್ವತ್ರಿಕ ಶಿಕ್ಷಣವನ್ನು ಕೊಟ್ಟರೆ ಇನ್ನು ಚಂದ ಎನ್ನಬಹುದು. ಪ್ರಸ್ತುತ ದಿನಮಾನಗಳಲ್ಲಿ ಸಗರನಾಡಿನ ಬೇಡ ಮಹಿಳೆಯರು ಶಿಕ್ಷಣ ಪಡೆಯುತ್ತಿದ್ದಾರೆ. ಜಾಗತೀಕರಣ ಆಧುನೀಕರಣಕ್ಕೆ ಒಳಗಾದ ಬೇಡ ಮಹಿಳೆ ಸಾಮಾಜಿಕ ಶಿಕ್ಷಣದ ಜೊತೆ ಜೊತೆಗೆ ತಾಂತ್ರಿಕ ಶಿಕ್ಷಣವನ್ನು ಪಡೆಯುತ್ತಿರುವುದಕ್ಕೆ ಸರಕಾರ ಸ್ತ್ರೀಯರಿಗೆ ಶೈಕ್ಷಣಿಕ ಸೌಲಭ್ಯಗಳನ್ನು ನೀಡುತ್ತಿರುವುದಕ್ಕೆ ಪ್ರಮುಖ ಕಾರಣವಾಗಿದೆ.

**೮. ವಿವಾಹ ವಿಚ್ಛೇದ ಸಮಸ್ಯೆ ಅಥವಾ ಪರಿತ್ಯೇಜನೆ**

ವಿವಾಹ ವಿಚ್ಛೆದನ ಎಂದರೆ ವಿದ್ಯುಕ್ತವಾಗಿ ಸ್ಥಾಪಿತವಾದಂತಹ ವೈವಾಹಿಕ ಸಂಬಂಧಗಳು ಕಾನೂನಿನ ಮೂಲಕ ಕೊನೆಗೊಳ್ಳುವುದಕ್ಕೆ ವಿವಾಹ ವಿಚ್ಛೇದನ ಎನ್ನಬಹುದು. ದಾಂಪತ್ಯ ಜೀವನದಲ್ಲಿ ಹೊಂದೀಣಿಕೆ ಇಲ್ಲದೆ ಇರುವಾಗ ಹೆಂಡತಿಯ ಕಲಹ ವಿವಾಹ ವಿಚ್ಛೇದನ ಗಂಡನ ಕ್ರೌರ್ಯ ವ್ಯಭಿಚಾರ, ನಪುಂಸಕತ್ವಕತೆ ನಾದಿನಿಯರ ಉಪಟಳ ಹೆಂಡತಿಯ ಬಂಜೆತನ ಅನೈತಿಕ ಲೈಂಗಿಕ ಅವ್ಯವಹಾರ ಅನಾರೋಗ್ಯ ವರದಕ್ಷಿಣೆ ದೌರ್ಜನ್ಯ ಈ ಎಲ್ಲಾ ಅಂಶಗಳು ವಿವಾಹ ವಿಚ್ಛೇದನಕ್ಕೆ ಕಾರಣಗಳಾಗಿವೆ.

ಸಗರನಾಡಿನಲ್ಲಿ ಬೇಡ ಮಹಿಳೆಯರು ಇತ್ತೀಚಿನ ದಿನಮಾನಗಳಲ್ಲಿ ವಿವಾಹ ವಿಚ್ಛೇದನಕ್ಕೆ ಒಳಪಡುತ್ತಿರುವುದನ್ನು ನೋಡಿದರೆ ಪಾಶ್ಚಾತ್ಯೀಕರಣದ ಪ್ರಭಾವ ಈ ಸಮುದಾಯದ ಮೇಲೆ ಆಗಿದೆ ಎಂದರ್ಥ. ಒಂದು ವೇಳೆ ವಿಚ್ಛೇದನವು ಪಡೆಯದೆ ಹೋದರು ಗಂಡನಿಂದ ಪರಿತ್ಯೇಜನೆ ಅಂದರೆ ದೂರವಾಗಿ ಬೇರ್ಪಡುವುದು ಕೆಲವು ವರ್ಷಗಳ ಕಾಲ ಬೇರೆಯಾಗಿರುವ ಸಂದರ್ಭ ಈ ಸಮುದಾಯದಲ್ಲಿದೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಇಲ್ಲಿನ ಸ್ತ್ರೀಯರ ದೃಷ್ಟಿಯಿಂದ ಪರಿತ್ಯೇಜನೆಯ ಪ್ರಕರಣಗಳು ಬಹಳ ಸಮನ್ವಯಾತ್ಮಕವಾಗಿವೆ. ಪರಿತ್ಯೇಜನೆಗೆ ಬಲಿಯಾದವರಲ್ಲಿ ಸಾಮಾನ್ಯವಾಗಿ ಸ್ತ್ರೀಯರು, ಇವರಿಗೆ ಜೀವನ ದಯನೀಯವಾಗಿರುತ್ತದೆ. ''ಪರಿತ್ಯಜನೆ ಅದಕ್ಕೆ ಬಲಿಯಾದ ಸ್ತ್ರೀಯೊಬ್ಬಳನ್ನು ಒಮ್ಮೆಲೆ ಅಸಹಾಯಕತೆ ಹಾಗೂ ಅನಿಶ್ಚಿತತೆಯೆ ಮಡಲಿಗೆ ನೂಕುತ್ತದೆ. ಬಡವರ್ಗದವರು ಇದಕ್ಕೆ ಒಳಗಾದಾಗ ಹಾಗೂ ಹೆಣ್ಣಿನ ತವರು ಮನೆಯವರು ಬೆಂಬಲ ನೀಡದಿದ್ದಾಗ ಅಂತಹ ಸ್ತ್ರೀಯರು ಅನಾಥರಾಗಿ ಬಿಡಬಹುದು. ಪರಿತ್ಯಜನೆಯಿದಂ ಗಂಡನ ಮನೆಯಿಂದ ಹೊರನೂಕಲ್ಪಟ್ಟ ಉದ್ಯೋಗವಿಲ್ಲದ ತವರಿನ ಸಹಾಯ ಪಡೆಯಲಾರದೆ ಹಾಗೂ ಮಕ್ಕಳೊಂದಿಗೆ ಬೀದಿಪಾಲಗುವ ಹೆಂಗಸರು ಸಮಾಜದ ದುಷ್ಟಶಕ್ತಿಗಳ ಹಿಡಿತಕ್ಕೆ ಸಿಲುಕಿ ದುರಂತಜೀವನ ನಡೆಸಿಕೊಳ್ಳಬೇಕಾಗುವುದು ಮಾಜಿನಿಂದೆ ಅಪಖ್ಯಾತಿ ಹಾಗೂ ಮಕ್ಕಳನ್ನು ಸಲಹುವುದು ತನ್ನನ್ನು ರಕ್ಷಿಸಿಕೊಳ್ಳುವುದು ಹೊರೆಯ ಜೊತೆಗೆ'' ಮುಂದೆ ಏನು ಎಂಬ ಚಿಂತೆ ಆಕೆಯನ್ನು ಕಾಡುತ್ತಿರುತ್ತದೆ. ಪರಿಹಾರ ಕಾಣುವ ಮಾಸವಂತೆ ಬೇಡ ಸ್ತ್ರೀಯರು ಆತ್ಮಹತ್ಯೆಗೆ ಶರಣಾಗಬಹುದು.

## ಅಧ್ಯಾಯ ೫

## ಉಪಸಂಹಾರ

ಒಟ್ಟಿನಲ್ಲಿ ಹೇಳುವುದಾದರೆ ಸಗರನಾಡು ತನ್ನದೇಯಾದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವುದರ ಜೊತೆಗೆ, ಭಾರತದೇಶಕ್ಕೆ ಅಪಾರ ಕೊಡುಗೆಯನ್ನು ನೀಡಿದೆ. ಸಗರ ಚಕ್ರವರ್ತಿಯ ಜೀವನ ಚರಿತ್ರೆ, ಅವನ ರಾಜ್ಯ ಆಡಳಿತ, ಹಾಗೂ ಸುರಪುರ ಸಂಸ್ಥಾನದ ಸ್ಥಾಪಕರಾದ ರಾಜಾ ಗಡ್ಡಿ ಪಿಡ್ಡನಾಯಕ, ಮೊದಲ ಸ್ವಾತಂತ್ರ್ಯ ಸಂಗ್ರಾಮದ ಕರ್ನಾಟಕದ ಕ್ರಾಂತಿ ವೀರ ಬಲವಂತ ಬಹಿರಿ ಬಹಾದ್ದೂರ ಶ್ರೀ ನಾಲ್ವಡಿ ರಾಜಾ ವೆಂಕಟಪ್ಪನಾಯಕ, (೧೮೫೭) ಇವರ ಸಾಹಸಮಹಿ ಜೀವನ, ಬೇಡರ ಧೈರ್ಯವಂತಿಕೆ, ಸಗರನಾಡಿನ ಸಂಸ್ಕೃತಿ, ಬೇಡ ಸಮುದಾಯದ ವಿಶಿಷ್ಟ ಸಂಪ್ರದಾಯಗಳು, ಆಚಾರ ವಿಚಾರ, ಪದ್ದತಿ, ನಡೆ-ನುಡಿ, ಇವೆಲ್ಲವುಗಳನ್ನು ಕುಲಂಕುಶವಾಗಿ ಸಂಶೋಧನೆ ಅಧ್ಯಯನ ಮಾಡಿನೋಡಿದಾಗ ಇಂತಹ ವೀರ ಪುಣ್ಯ ಭೂಮಿಯಲ್ಲಿ ಹುಟ್ಟಿದ ನಾವೆಲ್ಲರೂ ಧನ್ಯರು ಎಂಬ ಮನೋಭಾವನೆ ಮೂಡುತ್ತದೆ. ಅವರ ಸಾಹಸ, ದೇಶ ಅಭಿಮಾನ, ಇಂದಿನ ಯುವಕರಿಗೆ ಮಾದರಿಯಾಗುತ್ತದೆ. ಈ ಹಿಂದಿನ ಅರಸರ ರಾಜ್ಯ ಆಡಳಿತ ಸಾಮಾಜಿಕ ಸುವ್ಯವಸ್ಥೆಯನ್ನು ಅಧ್ಯಯನ ಮಾಡಿದಾಗ ಇಂದಿನ ರಾಜಕಾರಣಿಗಳು ಮುಖ್ಯಮಂತ್ರಿಗಳು ಮಂತ್ರಿಗಳು ಅವರನ್ನು ನೋಡಿ ಬಹಳಷ್ಟು ಕಲಿಯುದಿದೆ. ಪ್ರಸ್ತುತ ದಿನಮಾನಗಳಲ್ಲಿ ನಡೆಯುತ್ತಿರುವ ಕೋಮು ಗಲಬೆ ಕೊಲೆ, ಸುಲಿಗೆ, ಭಯೋತ್ಪಾದನೆ, ಅತ್ಯಾಚಾರ, ಅನಾಚಾರ, ಈ ಎಲ್ಲಾ ಸಾಮಾಜಿಕ ಸಮಸ್ಯೆಗಳು ರಾಜಮಹಾರಾಜರುಗಳು ಕಾಲದಲ್ಲಿ ಅಷ್ಟಾಗಿ ಕಂಡುಬರುತ್ತಿರಲಿಲ್ಲ ಎಂದು ಹೇಳಬಹುದು ಇಂತಹ ಅದ್ಬುತ ಇತಿಹಾಸವನ್ನು ಹೊಂದಿರುವ ಸಗರನಾಡಿನ ಬಗ್ಗೆ, ಸುರಪುರ ಸಂಸ್ಥಾನದ ಬಗ್ಗೆ, ದೇಶಕ್ಕಾಗಿ ಪ್ರಾಣವನ್ನೇ ತ್ಯಾಗ ಮಾಡಿದ ಬೇಡ ಸೈನಿಕರ ಬಗ್ಗೆ ಶಾಲಾ ಕಲೇಜು ವಿಶ್ವವಿದ್ಯಾಲಯಗಳ ಪಠ್ಯಪುಸ್ತಕಗಳಲ್ಲಿ ಏನು ಕಾಣಸಿಗುವುದಿಲ್ಲ. ಇದು ವೀರ ರಾಜರುಗಳಿಗೆ ಮಾಡಿದ ಅಪಮಾನ ಎಂದರೆ ತಪ್ಪಾಗಲಾರದು ಹಾಗೂ ಇಂತಹ ವೀರ ರಾಜರುಗಳ ಜೀವನ ಚರಿತ್ರೆಯನ್ನು ಅದರ ಸಾಮಾಜಿಕ ಜೀವನದ ಚರಿತ್ರೆಯನ್ನು

ವಿದ್ಯಾರ್ಥಿಗಳು ಓದಿ ತಿಳಿದುಕೊಂಡಾಗ ಅವರಲ್ಲಿ ಸ್ವಾಭಿಮಾನ ದೇಶ ಅಭಿಮಾನ ಮೂಡುತ್ತದೆ. ಸಗರನಾಡಿನ ಇತಿಹಾಸವನ್ನು ಪುಟಗಳನ್ನು ತಿರುವಿ ನೋಡಿದಾಗ ಹೆಮ್ಮೆಯಾಗುತ್ತದೆ. ಆದರೆ ಪ್ರಸ್ತುತ ಸಗರನಾಡಿನ ಪರಿಸ್ಥಿತಿಯನ್ನು ನೋಡಿದಾಗ ಮನಸ್ಸಿಗೆ ಖೇದ ಉಂಟಾಗುತ್ತದೆ. ಸ್ವಾತಂತ್ರಕ್ಕಾಗಿ ಹೋರಾಡಿದ ಬೇಡ ಸಮುದಾಯ ಸ್ವತಂತ್ರ್ಯ ನಂತರ ಅನೇಕ ಅನೇಕ ಸಮಸ್ಯೆಗಳಿಗೆ ಸಿಲುಕಿ ಹಿಂದುಳಿಯುತ್ತ ಬಂದಿತ್ತು. ಈ ಹಿಂದೆ ಬೇಡರು ಸೈನಿಕರಾಗಿ ರಾಜರುಗಳಾಗಿ ಉತ್ತಮ ಜೀವನವನ್ನು ನಡೆಸಿದವರು. ಇಂದು ಅವರ ಜೀವನ ಕಷ್ಟಕರವಾಗಿದೆ. ಬೇಡ ಪುರುಷರದ್ದು ಒಂದು ರೀತಿಯ ಸಮಸ್ಯೆಗಳಾದರೆ ಬೇಡ ಮಹಿಳೆಯರ ಸಮಸ್ಯೆಗಳು ಇನ್ನೊಂದು ರೀತಿಯವು. ಇಂದು ಬೇಡ ಮಹಿಳೆಯರು ಕ್ಷಣ ಕ್ಷಣಕ್ಕೂ ಸಂಕಷ್ಟದಲ್ಲಿ ಸಿಲುಕಿ ನರಳುತ್ತಿದ್ದಾರೆ, ಈ ಹಿಂದೆ ಹೇಳಿದ ಹಾಗೆ ಬೇಡ ಮಹಿಳೆಯರು ಪಂಜರದ ಗಿಣಿಗಳು ಎಂದು ಹೇಳಿದ್ದರೆ ತಪ್ಪಾಗಲಾರದು. ಬೇಡ ಸಮುದಾಯದ ಪುರುಷರುತಮ್ಮ ಮಹಿಳೆಯರನ್ನು ಎರಡನೇ ದರ್ಜೆಯ ಪ್ರಜೆಗಳನ್ನಾಗಿ ಕೀಳಾಗಿ ಕಾಣುತ್ತಾರೆ.

ಬೇಡ ಮಹಿಳೆಯರ ಸಾಮಾಜಿಕ ಸಮಸ್ಯೆಗಳಲ್ಲಿ ಒಂದಾದ ಘೋಷಾಪದ್ಧತಿಯು ಇವರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಹಿಂದುಳಿಯಲು ಪ್ರಮುಖ ಕಾರಣವಾಗಿದೆ. ಆದರೆ ಒಂದು ಸಂತೋಷದ ವಿಷಯವೇನೆಂದರೆ. ಈ ಪದ್ಧತಿ ಇಂದು ನಶಿಸಿ ಹೋಗುತ್ತಿದೆ. ಆದ್ದರಿಂದ ಬೇಡ ಸಮುದಾಯದಲ್ಲಿ ಹೆಣ್ಣು ಮಕ್ಕಳು ಶಾಲಾ ಕಾಲೇಜುಗಳಿಗೆ ಹೋಗಿ ಶಿಕ್ಷಿತರಾಗಿ ಹೊರಬರುತ್ತಿದ್ದಾರೆ. ಇದು ಇಂದಿನ ಬೇಡ ಸಮುದಾಯದ ಬದಲಾವಣೆಗೆ ಪ್ರಮುಖ ಕಾರಣವಾಗಿದೆ. ಅಲ್ಲದೇ ಎಲ್ಲ ಜಾತಿ ಸಮುದಾಯದ ಮಹಿಳೆಯರಂತೆ ಸಗರನಾಡಿನ ಬೇಡ ಮಹಿಳೆಯರು ಕೂಡ ಜನರ ಜೊತೆ ಬೆರೆತು ಸಾಮಾಜಿಕ ಜ್ಞಾನವನ್ನು ಪಡೆಯುತ್ತಿದ್ದಾರೆ. ಹಾಗೂ ಕಾನೂನಿನ ತಿಳವಳಿಕೆಯು ಬಂದಿರುವುದರಿಂದ ಸರ್ಕಾರ ಸ್ತ್ರೀಯರಿಗೆ ನೀಡಿರುವ ಹಕ್ಕುಗಳನ್ನು ತಿಳಿದುಕೊಂಡು ತಮ್ಮ ಹಕ್ಕನ್ನು ಚಲಾಯಿಸುತ್ತಿದ್ದಾರೆ.

ಇಷ್ಟೆಲ್ಲಾ ಬೇಡ ಮಹಿಳೆಯರಲ್ಲಿ ಬೆಳವಣಿಗೆಗಳು ಆದರೂ ಕೂಡ ಬೇಡ ಸಮುದಾಯದಲ್ಲಿ ಪುರುಷರದ್ದೆ ಸರ್ವಾಧಿಕಾರ. ಕುಟುಂಬದಲ್ಲಿ ಸಮಾಜದಲ್ಲಿ ಪುರುಷನ ಒಪ್ಪಿಗೆಯನ್ನು ಪಡದೇ ಮುಂದಿನ ಕೆಲಸವನ್ನು ಕೈಗೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಇದು ಮಹಿಳೆಯರಿಗೆ ಒಳ್ಳೆಯ ಪರಿಣಾಮವನ್ನು ಬೀರುವುದರಲ್ಲಿ ಸಂಶಯವಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಇಂದು ಬೇಡ ಸಮುದಾಯದಲ್ಲಿ ಮೊದಲಿನಷ್ಟು ಕಟ್ಟುನಿಟ್ಟಿನ ನಿಯಮಗಳು ಪದ್ಧತಿಗಳು ಸಂಪ್ರದಾಯಗಳಲ್ಲಿ ಸಡಿಲತೆಯನ್ನು ಕಾಣಬಹುದು. ಆದ್ದರಿಂದ ಆರ್ಥಿಕ ರಾಜಕೀಯ ಸಮಾಜಿಕ ಅಭಿವೃದ್ಧಿಯಾಗುತ್ತದೆ. ಇಂದು ಗೌರವಾನ್ವಿತ ಕುಟುಂಬದ ಮಹಿಳೆಯರು ಸಹ ರಾಜಕೀಯದಲ್ಲಿ ಭಾಗವಹಿಸುತ್ತಿರುವುದು ಒಳ್ಳೆಯ ಬೆಳವಣಿಗೆ ಯಾಗಿದೆ. ಎಷ್ಟೂ ಅಡೆತಡೆಗಳ ಸಮಸ್ಯೆಗಳ ನಡುವೆಯು ಸಹ ಬೇಡ ಮಹಿಳೆ ಧೈರ್ಯದಿಂದ ಎಲ್ಲ ರಂಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದು

ಸಂತೋಷದ ವಿಷಯ ಬೇಡ ಸಮುದಾಯದ ಪುರುಷರಲ್ಲಿಯು ಮನಪರಿವರ್ತನೆಯಾಗಿ ಮಹಿಳೆಯರಿಗೆ ಸ್ವಾತಂತ್ರ್ಯವನ್ನು ನೀಡುತ್ತಿದ್ದಾರೆ. ಬಡ ಬೇಡ ಕುಟುಂಬದ ಮಹಿಳೆಯರು ಹೆಣ್ಣಿನ ವ್ಯಾಪಾರ ತೋಟಗಳನ್ನು ಗುತ್ತಿಗೆ ಹಿಡಿದು ವ್ಯಾಪಾರ ಮಾಡುವುದು ಸ್ತ್ರೀ ಸಂರಕ್ಷಣೆಗಳನ್ನು ಕಟ್ಟಿಕೊಂಡು ಸೌಲಭ್ಯಗಳನ್ನು ಪಡೆದು ಸ್ವಾವಲಂಭಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಆದ್ದರಿಂದ ಇವರ ಆರ್ಥಿಕ ಸ್ಥಿತಿ ಸುಧಾರಿಸುತ್ತದೆ. ಮೊದಲಿನಷ್ಟು ಶೋಷಣೆ ಅತ್ಯಾಚಾರ ದೌರ್ಜನ್ಯಗಳು ಕಡಿಮೆಯಾಗುತ್ತಿವೆ.

ಎಲ್ಲಕ್ಕಿಂತ ಮುಖ್ಯವಾಗಿ ಬೇಡ ಮಹಿಳೆಯರು ಆತ್ಮವಿಶ್ವಾಸ ಹಾಗೂ ಅಂತಸತ್ವದ ಪ್ರಜ್ಞೆಯನ್ನು ಮೂಡಿಸಿಕೊಂಡಿದ್ದಾರೆ. ಮಹಿಳಾಪರ ಸವಲತ್ತು ಕಾನೂನುಗಳ ತಿಳುವಳಿಕೆ ಬಡ ಬೇಡ ಮಹಿಳೆಯರಿಗೂ ತಿಳಿಯುತ್ತಿವೆ. ಜಾಗತಿಕರಣ, ಉದಾರಿಕರಣ, ಆಧುನಿಕರಣ, ಶೈಕ್ಷಣಿಕ ಕಾರಣದಿಂದಾಗಿ ಸಗರನಾಡಿನಲ್ಲಿ ಮತ್ತು ಈ ನಾಡಿನ ಬೇಡ ಸಮುದಾಯದಲ್ಲಿ ಹೊಸ ಬದಲಾವಣೆಯ ಗಾಳಿ ಬೀಸುತ್ತಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ.

# ಜಾನಪದ ಗೀತೆಗಳು

## ಬೇಡ ನಾಯಕನಾದ ನಾಲ್ವಡಿ ರಾಜವೆಂಕಟಪ್ಪನಾಯಕನ ದುಂದುಮೇ ಜಾನಪದ ಗೀತೆ

ಕ್ರಿ.ಶ. ೧೮೫೭ರ ಭಾರತದ ಮೊದಲನೆಯ ಸ್ವತಂತ್ರ್ಯ ಸಂಗ್ರಾಮ ಬೇಡ ಸೈನ್ಯದ ವೀರತನ ಭೀಮರಾಯ ಮತ್ತು ರಾಮಣ್ಣರ ದೇಶ ದ್ರೋಹದ ಕುತಂತ್ರ ಮುಂತಾದ ಸನ್ನಿವೇಶಗಳನ್ನು ಕವಿ ಕಣ್ಣಾರೆ ಕಂಡಂತೆ ವಿವರಿಸಿದ್ದಾನೆ. ಇದೊಂದು ಜಾನಪದ ದುಂದುಮೆ ಎಲ್ಲಾ ಜಾನಪದ ಕವಿಗಳಂತೆ ಕಾರಣ ಇದರ ಕರ್ತೃ ಕೂಡ ಅನಾಮದೇಯ ಕವಿಯ ಹೆಸರು ಗೊತ್ತಿಲದ ಕಾರಣ ಇಲ್ಲಿ ಅವರ ಹೆಸರು ಬರೆಯಲಾಗಿಲ್ಲ ಕವಿಯ ಹೆಸರು ತಿಳಿದಿದ್ದರೆ ಚೆನ್ನಾಗಿತ್ತು. ಭವಿಷ್ಯ ಕವಿ ಆ ಕಾಲದವನೆ ಇರಬಹುದು. ಏಕೆಂದರೆ ಸ್ವತಂತ್ರ್ಯ ಸಂಗ್ರಾಮದ ದೃಶ್ಯವನ್ನು ಕಣ್ಣಾರೆ ಕಂಡು ವಿವರಿಸಿದಂತಿದೆ.

### ದುಂದುಮೇ ಜಾನಪದ ಗೀತೆ 

ಹೇ ದುಂದುಮ್ಮೆ ಎಂದೆಂದು ಪಾಡರಿ ಜಾಣರೆ
ದುಂದುಮ್ಮೆ ಬಸಮತನ ಹಬ್ಬ

ಕೇಮಲಸಾಹೇಬ ಸುರಪುರಕ ಬಂದು
ಬಾವಾನ ಭಾವೀಯ ಸ್ಥಳದಲ್ಲಿ ಇಳಿದು
ಬುದ್ಧಿವಂತರನೆಲ್ಲ ಬಳಿಯಲ್ಲಿ ಕರೆದು
ನಾನಾ ತರದ ವಿದ್ಯಾ ಮಾಡಿದರು ಪುದು

ಕೇಮಾಲ ಸಾಹೇಬ ಬಂದಾನೆಂದು
ಬಾವಾನ ತೋಟಕ್ಕೆ ಡೇರ್‍ಯಾವ ತಂದು

ಒಡಿಯಾರಿ ಪಾರಾಸ್ತಿ ಹೊಡಿಯರಿ ಮುಂದು
ತಡವು ಮಾಡಲಿಬ್ಯಾಡ ಜಲ್ದೀ ಹೋಗೆಂದು ೧

ಮುತ್ತೀನ ಪಲ್ಲಕ್ಕಿ ನೌಬತ್ತು ಬಾಜಿ
ಕೊತ್ವಾಲ ಹಿಡಿದಾರು ಉತ್ತಮ ತೇಜಿ
ನಿತ್ಯಾ ಮಾಡುತ ನಾವು ಗುರುವೀನ ಪೂಜೆ
ಸಗರ ಸಾವಿರ ಹಳ್ಳಿ ರೈತರು ರಾಜಿ ೨

ಸಾಹೇಬನ ಬೆಟ್ಟಿಗಿ ಹೋಗೋ ವಿಸ್ತಾರ
ಎದ್ದು ಬಡಿದಾರು ಆನಿ ಝೂಲಾ ಜರತಾರ
ಕಬ್ಬಿಣ ಹೊತ್ತಾರ ಹಳೆ ಮಂದಿ ಪೂರಾ
ಹಾರ್‍ಯಾರಿ ಬಿಳುತಾದ ಮರ್ದ ಸುರಪುರಿ ೩

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ.......

ನವಾಬು ಸುಲೆಮಾನಷಾ ಇಬ್ಬರೂ ಕೂಡಿ
ಕೂತ ಜಾಗದಲ್ಲಿ ಏಕಾಂತ ಮಾಡಿ
ಲಚಮನ ಸಿಂಗನು ಬರುವುದು ನೋಡಿ
ದೊರೆಗ್ಹೋಗಿ ಹೆಳ್ತಾರ ಧೈರ್ಯವ ಮಾಡಿ ೪

ಬಡೇ ಸಾಹೇಬನ ಹುಕುಮು ತಂದು
ದೊರೆಯ ಕೈಯೊಳಗೆ ಕೊಟ್ಟಾರ ಮುಂದು
ಇದರ ಉತ್ತರ ನೀವು ಜಲ್ದಿ ಹೇಳೆಂದು
ಹೇಳಿದ್ಹಾಂಗ ಬರೆದು ಹಾಕತೀವೆಂದು ೫

ಪೋಲೀಸು ಕೆಲಸವು ನಮಗೆ ಇರಲೆಂದು
ಇದ್ದ ಹತೆಯಾರಗಳನ್ನು ತಂದಿಡರಿ ಮುಂದು
ಮುಲಿರೆಯ ರೊಕ್ಕ ಎತ್ತುತ್ತೇವೆಂದು
ಹುಕುಮು ನಡಸ್ತೀವಿ ಕೇಳೋ ನಮದೊಂದು ೬

ಪೋಲೀಸು ಕೆಲಸವು ನಾವಿಡೋದಿಲ್ಲ
ಹತಿಯಾರ ಸಾಮಾನು ನಿಮಗೆ ಕೊಡೋಣಿಲ್ಲ
ಅದರ ಕಾನೂನನು ಕಾರ್ಬಾರಿ ಬಲ್ಲ
ಹೀಗಂತು ಸಾಹೇಬರಿಗೆ ಆಡಿದರು ಎಲ್ಲ ೭

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ.......

ಕಾಟಕ ಮಂದೀನ ಅಗಸಿಗೆ ಹಾಕಿ
ಅಗಸಿ ಪಾರ್‍ಯಾದಲ್ಲಿ ಇರಬೇಕು ಜ್ಯಾಕಿ
ಮೊಸರಿನ ಗಡಿಗ್ಯಾಗ ರುಕ್ಕ ಬರೆದ್ಹಾರೆ

ರುಕ್ಕ ಹೊಯ್ಯಾರಂಡಿ ಆಗ್ಯಾಳೊ ಪುಕ್ಕಿ ೮

ಬೇಡರಿಗೆ ಹಾಕ್ಯಾರ ಸೀಬರುಬಂಡ್ಯಗಸಿ
ಡೇರ್‍ಯಾ ಬಿಟ್ಟು ದೂರ ಗುಂಡ ಹಾರಸಿ
ಡೇರ್‍ಯಾದ ಹಗ್ಗಗಳು ಆಗ್ಯಾವ ಷಾಸಿ
ಬೇಡರು ಮಾಡಿದರು ತಿಳಿಲಿಲ್ಲಾ ಷಾಸಿ ೯

ಆದಿತ್ಯಾರುದಯಕ್ಕೆ ಹಾರಿತುಗುಂಡು
ಕೇಳಿದಾರೋ ಇಲ್ಲೊ ಸಾಹೇಬರ ಬಂಡು
ಹಿಂದಕ್ಕೆ ನಡೆದಾರು ಡೇರೆ ಸುಟ್ಟುಕೊಂಡು
ಕೈಸೆರೆ ಆಗ್ಯಾವು ಚಕಡಿ ಮದ್ದುಗುಂಡು ೧೧

ಕಂಪೊನಿ ಲಷ್ಕರು ದಿಲ್ಲೀರಾಯ್ತು
ಹೋಗೊದಕ್ಕೆ ಹೊತ್ತು ರಾತ್ರಿ ಬಹಳಾಯ್ತು
ಕೇಮಾಲ ಸಾಹೇಬಗ ಕೋಪ ಬಂದಿತ್ತು
ದಂಡ್ಹೋಗಿ ಲಿಂಗದಳ್ಳಿ ಹತ್ತಿರಿಳಿದಿತ್ತು ೧೨

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ ........

ಯಾಕೆ ಬಂದೆವು ನಾವು ಬೇಡರ ತಳ್ಳಿ
ದಂಡ್ಹೋಗಿ ಇಳಿದಿತ್ತು ಅದು ನಿಂಗದಹಳ್ಳಿ
ಸುತ್ತ ಮುತ್ತಾ ಹಾಳು ಮಾಡಿದರು ಹಳ್ಳಿ
ತೋಪನ್ನು ಹಚ್ಚಿದರು ವೆಂಕಟಾಪುರ ಕಳ್ಳಿ ೧೩

ನಿನ್ನ ಪಾದಕ ಬಂದೆ ಕೊಟ್ಟೂರು ಬಸವ
ಊರ ಸ್ವಾಧೀನ ಮಾಡೋ ನಾ ನಿನ್ನ ಶಿಶುವೆ
ಇಂಥ ಅರಸರಿಗೆಲ್ಲ ಬಳಸುವೆನು ಕಸವ
ನಿತ್ಯ ಪೂಜೆಗೆ ನಿನಗೆ ಮಲ್ಲಗಿ ತುಸುವ ೧೪

ಕೊಟ್ಟೂರು ಬಸವಗೆ ತಾ ಬೇಡಿಕೊಂಡ
ಸುರಪುರ ಸ್ವಾಧೀನ ನನಗೆ ಮಾಡೆಂದ
ಮಿತಿಯ ಇಲ್ಲದ ಕಾಯಿ ಹೊಡೆಸುವನೆಂದ
ಕೇಮಲ ಸಾಹೇಬ ಮನಸಿನೊಳಗಂದ ೧೪

ಸಿಟ್ಟಿಗೆರಿ ಸಾಹೇಬ ಬಟ್ಟಕಚಿಕೊಂಡು
ಹಚ್ಚಿದಾನೋ ತೋಪ ''ಬುರ್ಜ'' ನೆಡಿಕೊಂಡು
ಕದನ ಹತ್ತಿತ್ತು ಬೇಗ ಇದು ಏನು ಬಂಡು
ಹೊರಬಿದ್ದು ಹೋಗುತದ ಸುರಪುರ ದಂಡು ೧೬

ಹೇ ದುಂದುಮ್ಮೆ ಎಂದೆಂದು ಹಾಡಿರಿ ಜಾಣರೆ.....

ಎದುರು ದಂಡಿಗೆ ತಾವು ತೋಪುಗಳ ಹಚ್ಚಿ
ಬಹಾದ್ದೂರ ಮೆಚ್ಚಿದ ಬಂಗಾರದ ಮೊಚ್ಚಿ
ರಣ ಶೂರರಾಯರು ತೇಜೀಗಳುಚ್ಚಿ
ಕಡದವರಿಗೆ ಕೊಡುವೆನು ಕಂಠಿಸರ ಉಚ್ಚಿ ೧೭

ಜೋಕಿನ ಸಾಹೇಬತಾ ನಡೆದು ಬಂದ
ಡಂಕಾ ನಿಶಾನಿ ತನ್ನ ಕುದುರಿಗೆ ಹಿಡಿದಾ
ಬೇಗ ಬಂದು ದಂಡು ಕಾವೇರಿ ಕಡಿದಾ
ರೊಹಿಲ್ಯಾನ ಏಟಿಗೆ ಹಿಂದಕ್ಕೆ ಸಿಡಿದ ೧೮

ಕೇಮಾಲ ಸಾಹೇಬ ಶ್ರಮದಲ್ಲಿ ನಿಂತಾ
ಊರ ತೊಗಬೇಕು ನಮದೊಂದು ಭ್ರಾಂತ
ಒಂದೇಟಿಗೆ ಸತ್ತಾನೋ ಸರದಾರ ಇಂಥ
ಸುತ್ತದಾರಿಗಳು ಗಂಡಿಜಾಗಂತ ೧೯

ತಲೆಯ ಟೊಪ್ಪಿಗೆ ಎರಡು ಕೈಯಲ್ಲಿ ಹಿಡಿಉದ
ದೊರೆ ಬಹರಿ ಬಹದ್ದೂರಿಗೆ ಎದುರಾಗಿ ನಡೆದು,
ಮುಂದಿಟ್ಟು 'ಪುರ್ನಿಯ ಸಲಾಮ' ಹೊಡೆದು
ದೊರೆ ನೋಡಿ ದಾಳಿ ಬಂತೆಂದು ನುಡಿದು ೨೦

ಹೇ ದುಂದುಮ್ಮೆ ಎಂದೆಂದು ಹಾಡಿರಿ ಜಾಣರೆ.......

ಕಾಣುತಲೆ ರೋಹಿಲರಿಗೆ ಚಂದ್ರಾನ ಕೊಟ್ಟಿ
ಸಾಹೇಬರ ಬಿಟ್ಟರ ಕುಲದಲ್ಲಿ ಬಟ್ಟಾ
ತಲೆಯ ಕೊಯ್ಯರಂತೆ ಅಪ್ಪಣೆಯ ಕೊಟ್ಟ
ಧೈರ್ಯ ಸಾಲದೆ ಕುಂತಜಾಗ ತಾ ಬಿಟ್ಟ ೨೧

ಹಳಿ ಮಂದಿ ಎಲ್ಲಾರು ನಿಂತವರು ನೋಡಿ
ತಳಿಯಾಕ ಇಳಿದಾರ ಪ್ರಾಮಿಗಳ ಜೋಡಿ
ಒತ್ತಟ್ಟಿ ಆಯಿತು ದಂಡ ಹಿಂದಕ್ಕೆ ನೋಡಿ
ಕವಲು ಕೊಟ್ಟರು ಸರ್ವರೆಲ್ಲರು ಕೂಡಿ ೨೨

ಅಷ್ಟರೊಳಗೆ ತಾನು ಭೀಮರಾಯ ಬಂದು
ಇನ್ನಾ ಈ ಊರೊಳಗೆ ಇರಬಾರದೆಂದು
ಶಹರಕ್ಕೆ ನಾವು ಹೋಗೊಣ ಮುಂದು
ಹುಜೂರನ ಬೆಟ್ಟಿಯ ಮಾಡಿಸುತ್ತೇನೆಂದು ೨೩

ರಾಜ ಸಾಹೇಬರಲ್ಲಿ ರಾಮಣ್ಣ ಬಂದು
ಶಹರದ ದಾರಿ ನೀವು ಹಿಡಿಯಿರಿ ಮುಂದು
ಬಳಿಯಲ್ಲಿದ್ದ ವಸ್ತು ನನಗೆತಾರೆಂದು
ನಾನು ಮನೆಗೆ ಹೋಗಿ ಬರುತಿನಿ ಎಂದು ೨೪

ಹೇ ದುಂದುಮ್ಮೆ ಎಂದೆಂದು ಪಾಡಿ ಜಾಣರೆ.......

ನಾ ಹುಟ್ಟಿದ ಮ್ಯಾಲೆ ನೋಡಿಲ್ಲಾ ಇಂಥಾ
ದಾವ ಸೂಳೆ ಮಗನು ಮಾಡ್ಯಾನೋಭ್ರಾಂತಾ;
ಮೊರೆ ಬೈರಿ ಬಹಾದ್ದೂರ ಭ್ರಾಂತಿಯಾಗಿ ಕುಳಿತ
ಅವ್ವ ಈಶ್ವರಮ್ಮನ ವರವೀರ ಪುತ್ರ ೨೫

ಗೋಪಾಲ ಸ್ವಾಮಿಯ ಗುಡಿಗೆ ತಾ ಬಂದ
ಮನವಿ ಎನ್ನ ಮೇಲೆ ದಯವಿರಲೆಂವ
ಇಂದಿಗೆ ಸುರಪುರ ಎರವಾಯಿತಂದ
ಶಹರದ ದಾರೀ ಹಿಡಿದಾನ ಮುಂದ ೨೬

ಬೆಳತನಕ ಸಾಹೇಬರು ಮಾಡಿಲ್ಲ ನಿದ್ದಿ
ದಂಡಿಗಿ ಎದುರಾಗಿ ಹೋಯಿತು ಸುದ್ದಿ
ಊರೊಳಗೆ ಯಾರಿಲ್ಲ ಮೆಲಕ್ಕೆ ಬಾ ಬುದ್ದಿ
ಕೇ ಮಲಸಾಹೇಹ ಪುಂಟನೆ ಸಿದ್ದಿ ೨೭

ಮೇಲಕ್ಕೆ ಬಾರಂತಿ ತಿಳಿವಲ್ದು ಘಾಸಿ
ಮೇಲಕ್ಕೆ ಬಂದರೆ ಜೀವ ಆದಿತ್ತೋ ಘಾಸಿ
ಹನ್ನೆರಡು ಸಾವಿರ ಮಂದಿ ತಿದ್ದಿತ್ತೊ ಮೀಸೆ
ಉದಯ ಹೊಂಡದರಾಗ ಹೋಯ್ತೆಲ್ಲ ಆಶೆ ೨೮

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ......

ತೈಬಾಲಿ ತಮ್ಮ ಮೊಹಮ್ಮದಲಿ ಊರೊಳಗೆ ಇದ್ದು
ಕೇಮಾಲ ಸಾಹೇಬನ ಪಾದಕ್ಕೆ ಬಿದ್ದು;
ಸಾಹೇಬನ ಮುಂದೆ ಹೇಳ್ತಾನ ಸುದ್ದಿ ಆದದ್ದು
ಊರೊಳಗೆ ಯಾರಿಲ್ಲ ಹೋಗ್ಯಾರ ಎದ್ದು ೨೯

ಎಂಥ ಬಂಡರ ಜಾಗ ಉಪಾಯದಿಂದ್ಹೊಯ್ತೊ
ಹನ್ನೆರಡು ಸಾವಿರ ಹಳೆಮಂದಿ ಏನಾಯ್ತೊ
ಸೋಮಾರ ದುದಯಕ್ಕೆ ಎದುರಿಗ ಆಯ್ತು
ಬುದ್ಧಿವಂತರಿಲ್ಲದಚ್ಚು ಮರದ್ಹೋಯ್ತು ೩೦

ಕೇಮಾಲ ಸಾಹೇಬ ಮೇಲಕ್ಕೆ ಬಂದಾ
ವಿಬರಿ ಮೇಲಕೆ ನಿಂತು ದುರುಮುಂಜಿ ನೋಡಿದ
ಇಂಥ ಠಾಣೆಗಳು ಸರಿಗಾಣೆನೆಂದಾ
ಅಪ್ಪಣೆ ಕೊಟ್ಟಾನು ಸುಲಗಿ ಮಾಡೆಂದು ೩೧

ಬಂದ ಬರತಲಿ ಸಾಹೇಬ ದರಬಾರ ಹೊಕ್ಕ
ಎಲ್ಲಿ ನೋಡಿದರಲ್ಲಿ ಬೆಳ್ಳಿ ಬಂಗಾರ ಬದುಕ
ಏನು ಸೋಜಿಗವೆಂದು ಕೈ ಬಡಿದು ನಕ್ಕ
ರಾಯಪ್ಪ ರಾಚಪ್ಪ ಕೈಯೊಳಗೆ ಸಿಕ್ಕ ೩೧

ಹೇ ದುಂದುಮೆ ಎಂದೆಂದು ಪಾಡಿರಿ ಜಾಣರೆ.......

'ಗೋರ ಸಾಹೇಬ'ರಲ್ಲಿ ಬಂದು ಕೂಡಿದರು
ಏನೇನು ಬದುಕೆಂದು ತಾರೀಪ ಮಾಡಿದರು
ಚಕಡಿ ಹೇರಿತಂದು ಮಾತಾನಾಡಿದರು
ತುಂಬಿ ಭರತಿ ಮಾಡಿ ಎತ್ತ ಹೂಡಿದರು ೩೩

ಆನೆ ಕುದುರಿ ಒಂಟಿ ಹರಾಜು ಮಾಡಿದರು
ಮಿಗಿಲಾಗದ ಬಂಗಾರ ವಸ್ತು ನೋಡಿದರು
ಚೆಲುವಾದ ಸಾಮಾನು ಒಂಟಿ ಮ್ಯಾಲ್ಹೇರಿದರು
ಕೇಮಲ ಸಾಹೇಬನ ಕವಲ ಸಾರಿದರು ೩೪

ಮರುದಿವಸ ಉದಯಕ್ಕೆ ಚಕಡಿಗಳು ಸಾಗಿ
ಊರಿಗಿರಿಲಿ ಅಂತ ಹೇಳಿದರು ಕೂಗಿ
ದಿವಸ ಪಾಡಿಲ್ಲ ಶಿವರಾತ್ರಿ ಭೋಗಿ
ಸುಲಗಿ ಸೇರಿತು ಲಿಂಗಸೂರಿಗೆ ಹೋಗಿ ೩೫

ಮಾರನೆ ದಿವಸಕ್ಕೆ ದೊರೆ ಶಹರಕ್ಕೆ ಹೋದ
ವನಪರ್ತಿ ರಾಜನ ಬೇಟ್ಟಿಯು ಆದ
ಫೈಗಂಬರ್ ಬಜಾರದೊಳಗೆ ಇಳಿಲಿಕ್ಕೆಹೋದ
ಮುಂದಿನ ಸಂಗತಿ ತಿಳಿಲಾರದೆ ಹೊದ ೩೬

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೇ......

ವನಪರ್ತಿರಾಜು ಮಾಡಿದನು ಪಂದು
ದೇವಡಿಯಲ್ಲಿ "ಪಹರೆ" ಯಾರಿದ್ದಿರೆಂದು
ಸುರಪುರದ ಅರಸನು ಬಂದಾನೆಂದು
ಸಾಲಾರ ಜಂಗನಿಗೆ ತೀವ್ರ ಹೇಳೆಂದು ೩೭

ಮಂಗಳವಾರುದಯಕ್ಕೆ ದೊರೆ ಬಿಟ್ಟ ಊರ
ಬೈರಿ ಬಹಾದ್ದೂಹ್ಯೊಕ್ಕ ಗೋಲ್ಕುಂಡ ಶಹರ
ಮುಂದೆ ಹೇಳಿವಿ ನಾವು ಸರ್ದಾರನ ವಿಸ್ತಾರ
ಹಚ್ಚಿ ಬಂದಾನಿವನು ಅಂತರಂಗದ ಫೇರಾ ೩೯

ದೊರೀನ ಸದರಿಗೆ ತಂದು ಮಾಡಿದರು ವಿಚಾರ
ದೊಡ್ಡ ಸರದಾರನ ತಲೆ ಹೊಡಿಸಿ ಬಂದೆಲ್ಲೊ ಚೋರ
ಎಂಥಾದ್ದು ಮಾಡಿದ್ದಿ ಕೇಟ್ಟ ಬೇಂಡಾರ
ಹೊಡೆಸಿ ಬಿಡುವೆನು ನೀನ್ನ ಜೀವದಿಂದಾ ಠಾರಾ ೪೦

ನಾನು ಹೇಳುವೆನು ಕೇಳೊ ಸರಕಾರ
ಕೆಟ್ಟು ಬಂದಿನಿ ನಾನು ಬಿಟ್ಟು ಸುರಪೂರ
ಕಾರ್ಭಾರಿ ಮಂಡಲಿನ ಹಿಡಿತರಿಸು ಪೂರಾ
ಮೂರು ಕೋಟಿಯಲ್ಲಿ ಮಾಡೋ ವಿಚಾರ ೪೧

ಮುಂದಾಗಿ ಲಡಾಯಿ ನೀ ಮಾಡಿರೆಂದು
ಸತ್ತು ಹೋದನು ದೊಡ್ಡ ಸರದಾರ ಮುಂದು
ಇದಕ್ಕೆ ಉತ್ತರ ನೀ ಜಲ್ದಿ ಹೇಳೆಂದು
ಕೋರ್ಟಿನ ಮಸಲತಿ ಮಾಡತೀವೆಂದು ೪೨

ಮುಂದಾಗಿ ಲಡಾಯಿ ನಾನು ಮಾಡಿಲ್ಲ
ಕಾಟಗ ಮಂದಿ ಮಾತು ನಾನು ಕೆಳಲಿಲ್ಲ
ಲಡಾಯಿಗೆ ಅಪ್ಪಣೆ ನಾನು ಕೊಟ್ಟಿಲ್ಲ
ಆದಂತ ಸುದ್ದಿಯು ಭೀಮರಾಯ ಬಲ್ಲ ೪೩

ಬಡೇಸಾಹೇಬ ತಾ ಕೇಳಿ ಸಂತೋಷವಾಗಿ
ಕೋರ್ಟಿನ ಮಸಲತಿ ಮಾಡಬೇಕಾಗಿ
ಟೀಲರ ಸಾಹೇಬ ಸುರಪುರಕ್ಕೆ ಹೋಗಿ
ಕಾರ್ಭಾರಿ ಜನರನ್ನು ಕಳಸರಿ ಬೇಗ ೪೪

ಟೇಲರ ಸಾಹೇಬ ದೊರೆ ಬಳಿಗೆ ಬಂದು
ನಾನು ಸುರಪುರಕ್ಕೆ ಹೋಗುವೆನೆಂದು
ಕಾರ್ಭಾರಿ ಜನರನ್ನು ಕಳಿಸುವೆನೆಂದು
ಜವಾಬು ಕೊಡು ನೀನು ಬಹು ಧೈರ್ಯದಿಂದ ೪೫

ಟೇಲರ ಸಾಹೇಬ ಸುರಪುರಕ್ಕೆ ಬಂದಾ
ಕಾರ್ಭಾರಿ ಜನರನ್ನು ಶಹರಕ್ಕೆ ನಡಿರೆಂದ

ಕೋರ್ಟಿನ ಜಾವಬು ಮಾಡಿರಿ ಮುಂದಾ
ಜಲ್ದಿ ನಿಮ್ಮ ದೋರಿನ್ನ ಉಳಿಸಬೇಕೆಂದಾ ೪೬

ಕಾರ್ಭಾರಿ ಮಂಡಳಿಯು ಶಹರಕ್ಕೆ ಹೊರಟು
ಕುದುರಿಗಿ ಹೇರ್‍ಯಾರ ಹಳಿ ಹಳಿ ತಟ್ಟು
ಶಲ್ಯಾ ಮುಂಡಾಸನೇಲ್ಲ ಬತ್ತೀಯ ಇಟ್ಟು
ಹೋಗಿ ನೀಂತಾರ ಬಡವೇಷವ ತೊಟ್ಟು ೪೭

ಸಾಹೇಬರು ಮಾಡಿದರು ಕೆಲಸವು ಪಕ್ಕಾ
ವ್ಯರ್ಥದೊರೆ ಹೋಗಿ ಕೈಸೆರೆ ಸಿಕ್ಕಾ
ಭೀಮರಾಯ ಮಾಡಿದನು ಕೆಲಸವು ಪಕ್ಕಾ
ರಾಮಣ್ಣ ಬರಲೆಂದು ಹೆಳ್ಯಾನ ಲೆಕ್ಕಾ ೪೮

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ ...........

ಭೀಮರಾಯ ಆಲೋಚನೆ ಮಾಡಿದನು ಬಂದು
ಇನ್ನು ಈ ಮಾತು ನಮಗೆ ಬಂತೆಂದು
ಹೊರಗೆ ಹೇಳುತಾರ ಮಾತು ಮತ್ತೊಂದು
ಹೆದರಬೇಡಿರಿ ಬುದ್ದಿ ಕರೆದ್ಹೋಯ್ತುವೆಂದು ೪೯

ಬುದ್ದಿ ಹೇಳುವಂತ ತಾಯಿ ತಂದಿ ಇಲ್ಲ
ಕ್ಷುದ್ರ ಮನುಜರ ಮಾತು ನಿ ಬೆಳೆಸಿದಲ್ಲ
ಹಿರಿಯ ಕಿರಿಯರ ಮಾತು ನೀ ಕೆಳಲಿಲ್ಲ
ಸುರಪುರ ಗೋಪಾಲ ತಾ ಮುನಿದನಲ್ಲ ೫೦

ಭೀಮರಾಯನ ಮಾತು ದೊರೆ ತಾನು ಕೇಳಿ
ಸಾಹೇಬರ ಮುಂದ್ಹೋಗಿ ಬದಲು ಮಾತು ಹೆಳಿ
ಕೇಳುತಲೆ ಸಾಹೇಬರು ಕೋಪಾವು ತಾಳಿ
ಚೆನ್ನಪಟ್ಟಣ ದಾಟಿ ಬಯ್ಯುರಂತೆ ಹೇಳಿ ೫೧

ದೊರೆಯನ್ನು ಭೀಮರಾಯ ಕೈಸೆರೆ ಕೊಟ್ಟ
ಮನಸಿನೊಳಗೆ ಇದ್ದ ಚಿಂತೆಯ ಬಿಟ್ಟ
ನಕ್ಕಂತ ಸುರಪುರದ ಹಾದ್ಹಿಡಿದು ಹೊಂಟ
ದೌಲತ್ತಾ ಇವ ಹಾಳು ಮಾಡಿದನು ತೊಂಟ ೫೨

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ.........

ವೇಂಕಟಪ್ಪ ನಾಯ್ಕಂದು ಭೀತಿ ಬಾಳಿತ್ತು
ಸುತ್ತು ದೇಶದ ಜನ ನಡಗೊತಲಿತ್ತು
ಹಳೆ ಮಂದಿ ಉಜರತ್ತು ಭರಪೂರ ಇತ್ತು
ವೆಂಕಟರಮಣನ ದಯವು ತಪ್ಪಿತ್ತು ೫೩

ವೇಂಕಟಪ್ಪ ನಾಯಕ "ಮೃಗಜಾತಿ ಶೂರ"
ಕೇಳ ಇದ್ದಿಲ್ಲ ಇಂಥ ಸರದಾರ
ಒದಗಿ ಬಂದಿತು ಬೇಗ ಕಂಪನಿ ಸರಕಾರ
ಸ್ಥಿರವಾಗಿ ಇರಲಿಲ್ಲ ಮುಂದಿನ ವಿಸ್ತಾರ ೫೪

ಫಾಲ್ಗುಣ ಪ್ರತಿಪದ ಹುಡುಗರು ಕೊಡಿ
ಹತವಾದ ಕಾಮನ ಬೂದಿ ಚೆಲ್ಯಾಡಿ
ಮಿತಿಯನಿಲ್ಲದ ಹೋಳಿ ಪದಗಳ ಹಾಡಿ
ರತಿದೇವಿ ರಮಣನ ಬೂದಿ ಚೆಲ್ಯಾಡಿ ೫೫

ಆದಿ ಅಂತ್ಯ ಹಿಡಿದು ಪದಗಳ ಪಾಡಿ
ಬುದ್ಧಿವಂತರ ಮುಂದ ಕರ ಮುಗಿದು ಬೇಡಿ
ಪರಿಕ್ಷೆ ಮಾಡಿರಿ ದೈವ ಒಂದೊಂದು ನೋಡಿ
ತಪ್ಪು ಕ್ಷಮೆ ಮಾಡಿರಿ ಶಿಶುವಿನ ನೋಡಿ ೫೬

ಹೇ ದುಂದುಮ್ಮೆ ಎಂದೆಂದು ಪಾಡಿರಿ ಜಾಣರೆ.......

ಭರದಿಂದ ಕರತಂತು ಇದು ಮಾಘಮಾಸ
ಭರದಿಂದ ಒದಗೀತು ಫಾಲ್ಗುಣ ಮಾಸ
ಬರೆದಂಥ ಪದಗಳು ಮನಕೆ ಉಲ್ಲಾಸ
ಧರೆಯೊಳು ವಾಗಣಗೇರೆ ಗೋಪಾಲವಾಸ ೫೭

ಮಂಗಲ ಮಸ್ತು ಶ್ರೀ ಗೋಪಾಲನಿಗೆ
ಮಂಗಲ ಮಸ್ತು ಶ್ರೀ ದೇವಿಯರಿಗೆ
ಮಂಗಲಮ್ ನಮೋಸ್ತು ಕೋಶಲರಾಜನಿಗೆ
ಮಂಗಲ ಮಸ್ತು ರತಿಯ ಕಮಣನಿಗೆ

ಹೇ ದುಂದುಮೆ ಎಂದೆಂದು ಪಾಡಿರಿ ಜಾಣರೆ
ದುಂದುಮ್ಮೆ ಬಸವಂತನ ಹಬ್ಬ

## ಸತ್ಯಜ್ಞ ಕಂಡ ಸಗರನಾಡು

ಶ್ರೀ ಸಿದ್ಧರಾಮ ಪೋಲಿಸ್ ಪಾಟೀಲ. ಬಿ.ಇ.

ಸಗರನಾಡೆಂಬುದು ಮಿಗೆ ಶರಣರ ಬೀಡು !
ಸಗರನಾಡಿನ ಮಹಿಮೆ ತಾ ಹೇಳುವುದು
ಹಗುರವೆನಲ್ಲ ಸತ್ಯಜ್ಞ ॥ ॥೧॥

ಅರಳಗುಂಡಿಗೆ ಶರಣ ಹಿರೇಮಠದ ಷಣ್ಮುಖರು
ಪರಮ ದಾಸೋಹ ಅಧ್ಯಾತ್ಮ ವಚನಗಳು
ಪರಮದೈವರಿವರು ಸತ್ಯಜ್ಞ ॥ ॥೨॥

ಶಹಪೂರ ಚರಬಸವ ಮಹಿಷಾಸುರ ಮರ್ದಿನಿಯು
ಅಹ! ಗುಡ್ಡದೊಳು ಬುದ್ಧಮಲಗಿದದ ದೃಶ್ಯ
ಬಹು ಭವ್ಯ ನೋಟ ಸತ್ಯಜ್ಞ॥ ॥೩॥

ಕರುಣೇಶ ಆಂದೋಲ, ಒರಡಿ ಮಲ್ಲಿಕಾರ್ಜುನ
ವರಲಕ್ಷ್ಮಿ ಸಗರ ಊರೊಳಗೆ ಹೀಗೆಯೇ
ಹರಡಿಹರು ದೇವ್ರು ಸತ್ಯಜ್ಞ ॥ ॥೪॥

ಬಸವಾ ಯುಗದಾ ಶರಣ ಹೆಸರಾಂತ ಭೋಗಣ್ಣ
ಕಸಬು ನೇಕಾರ ಜೇಡರದಾಸಿಮಯ್ಯನ
ವಸತಿ ಈ ನಾಡು ಸತ್ಯಜ್ಞ ॥ ॥೫॥

ತಿಂಥಿಣಿ ಮೌನೇಶ್ವರ ಎಂತ ಸತ್ಯವುಳ್ಳವನು |
ತಂತಿ ಗಲ್ಲದೊಳು ಚುಚ್ಚೊಂಡು ಕುಣಿವ ಪುರ
ವಂತರ ನೋಡ ಸತ್ಯಜ್ಞ ॥ ॥೬॥

ಗೊನಾಲದೊಳಗಿರುವ ಮೌನಪ್ಪ ಗುಡಿನೋಡು
''ಮಾನವಕುಲವು ಒಂದೆ''ಂಬ ಭಾವವನು
ತಾನೆ ಸಾರುತಿದೆ ಸತ್ಯಜ್ಞ || ||೭||

ಮುಂದಾಗುವುದನು ಬಹು ಹಿಂದೆಯೇ ಸಾರಿರುವ
ಸುಂದರ ಕೊಡ್‌ಕಲ್ 'ಕಾಲಾಜ್ಞನ' ವದು ತಾ
ಎಂದಿಗೂ ಸತ್ಯ ಸತ್ಯಜ್ಞ || ||೮||

ಉನ್ನತದ ಮಹಾಕಾವ್ಯ ಕನ್ನಡದ ಜೈಮಿನಿಯೆ
ಕನ್ನಡಕೆ ಕೊಟ್ಟು ಲಕ್ಷ್ಮೀಶ ಇಲ್ಲಿಯವ
ಇನ್ನೇನು ಬೇಕು? ಸತ್ಯಜ್ಞ || ||೯||

ವರ ಶೇಷಾಶಾಸ್ತ್ರಿಗಳ ಸುರಪೂರ ಪಂಚಾಂಗ
ಪರಮ ಸಂಗೀತ ಕಲೆ, ಧರ್ಮ ಸಂಸ್ಕೃತಿಗೆ
ಸುರಪೂರ ಸತ್ಯಜ್ಞ || ||೧೦||

'ಸುರಪೂರ' ವೆಂಬುವರು 'ಸುರರ-ಪುರ'ವೇ ಆಗಿ
ಇರುವ ಜನರೆಲ್ಲ ದೇವ, ದೇವತೆಯಾಗಿ
ಮರೆದಿದ್ದರಂತೆ ಸತ್ಯಜ್ಞ || ||೧೧||

ದೊರೆಗಳಾ ದರಬಾರು ಪುರಸುತ್ತಿದಾ ಕೋಟಿ
ಪರಮ ವೇಣುಗೋಪಾಲಸ್ವಾಮಿ ಗುಡಿ, ಇವು
ಸುರಪೂರ ದೃಶ್ಯ ಸತ್ಯಜ್ಞ || ||೧೨||

ದಿಟ್ಟ ವೆಂಕಪ್ಪ ದೊರೆ ಅಟ್ಟಿದನು ವೈರಿಗಳ
ಕೆಟ್ಟಿದನು ಭದ್ರರಾಜ್ಯರಾವನ್ನು ಪ್ರಜೆಗಳಿಗೆ
ಕೊಟ್ಟ ಸುಖ-ಶಾಂತಿ ಸತ್ಯಜ್ಞ || ||೧೩||

ಔರಂಗಜೇಬನು ಧೀರತನದಿಂಗ್ದವ
ಕ್ರೂರ ಬ್ರಿಟಿಷರೊಳ್ ಹೋರಾಡಿ ಮಡಿದರೈ
ವೀರ ನಾಯಕರು ಸತ್ಯಜ್ಞ || ||೧೪||

ವನದುರ್ಗ, ಶಹಪೂರ, ಸನಿಹ ವಾಗಿಣಗೇರಿ
ಮನ ಸೆಳೆದ ಭವ್ಯ ಕೋಟೆಗಳ ನೋಡುತ್ತಾ
ನೆನಬೇಕು ದೊರೆಯ ಸತ್ಯಜ್ಞ || ||೧೫||
ರಜಾಕಾರರ ಎದುರು ಭುಜ ಬಲವ ತೋರಿಸಿರು

ರಾಜನ ಕೋಳೂರು ವಿರಪಣ್ಣಗೌಡ ತಾ
ಅಜರಾಮರನೈ ಸತ್ಯಜ್ಞ ॥ ॥೧೬॥

ಭೀಮೆ ಕೃಷ್ಣೆಯರು ಈ ಭೂಮಿಯಲ್ಲಿ ಹರಿದು ತಾ
ಕ್ಷಾಮ ಪರಿಹಾರ ಗೈಯ್ಯುವಲಿ ಮುಂದೊಮ್ಮೆ
ಕ್ಷೆರಿಯ ನಿಧಿಯಹುದು ಸತ್ಯಜ್ಞ ॥ ॥೧೭॥

ಕೃಷ್ಣೆ ಯೋಜನೆ ಮುಗಿದು, ಉಷ್ಣ ಭೂಮಿಗಿಹ ಆ
ತೃಷ್ಣೆ ತೀರಿದರೆ, ಬೆಳೆ ಬಂದು ರೈತರಿಗೆ
ಉಷ್ಣೀಷ ಹಸಿರು ಸತ್ಯಜ್ಞ ॥ ॥೧೮॥

ಮಂಗಳೂರಗಣಿ ನೋಡು, ಹಂಗೆಯೇ ತಾಮ್ರ ಗಣಿ,
ಬಂಗಾಳ ಬೆಳೆವ ಭೂತಾಯಿಯನು ಕಂಡು
ದಂಗಾದೆ ನಾನು ಸತ್ಯಜ್ಞ ॥ ॥೧೯॥

ಹೇಳುವುದು ಬಹಳುಂಟು ಹೇಳಿದೆನು
ಹೇಳುತ್ತಾ ಹೋದ ಹೋದಂತೆ ಈ ನಾಡ
ಆಳ. ಹೆಚ್ಚುವದು ಸತ್ಯಜ್ಞ ॥ ॥೨೦॥

# ಮೈ ಮನ ಪುಳಕಿತ ಸಿರಿನೋಡ

ಶ್ರೀಸಂಗಯ್ಯ ಹಿರೇಮಠ ಎಂ.ಎ

ಸಗರನಾಡಿನ ಸುಂದರ ಬೆಟ್ಟ
ಹಬ್ಬಿದೆ ಪೂರ್ವದಿ, ಪಶ್ಚಿಮ ನಿಟ್ಟ
ಕಂಗೊಳಿಸುವುದು ಕಣ್ಮಣಿ ಕಟ್ಟಿ
ಸುರಲೋಕದ ಸೌಂದರ್ಯವನ್ನು ಮೆಟ್ಟಿ !

ಹಚ್ಚನೆ ಹಸಿರಿನ ಸೀರೆಯನುಟ್ಟು
ತರ ತರ ಹೂಗಳ ಒಡವೆಗಳುಟ್ಟು
ನರ್ತಿಸುತಿಹಳು ಭೂಸಲೆಯಲ್ಲಿ
ಮೈ ಮನ ಪುಳಕಿಪ ಸಿರಿ ನೋಡಲ್ಲ !

ಹರಿಯುವ ಝರಿಗಳ ಮದ್ದಲಿ ನಾದ
ಗಿಳಿ-ಕೋಗಿಲೆಗಳ ''ಸರಿಗಮ'' ವೇದ
'ಚೀವ್ ಚೀವ್' ಗುಟ್ಟುವ ಗುಬ್ಬಿಯ ತಾಳ
ನಲಿಯುವ ನರ್ತಕಿಗೆ ಹೆಮ್ಮೆಳ ನಾಚಿತು ಊರ್ವಶಿ
ಸ್ವರಮೇಳ !

ವಿಸ್ತಾರ ಹೊಂದಿದೆ ಅರೆಗಲ್ಲು ಗಗನವ ಚುಂಬಿಪ ನಿಲ್ಲುಗಲ್ಲು
ಸುತ್ತಲು ಹಸಿರಿನ ಹಸಿಹುಲ್ಲು ನಿರ್ಜವಿಗೆ ಚೇತನ ಮನದಲ್ಲೂ !

ಬಂಗಾರದ ರವಿ ಕಿರಣವ ತಾಗಿ ಕಾಮನ ಬಿಲ್ಲಿನ
ವೇದಿಕೆಯಾಗಿ ಕಂಗೋಳಿಸುತ್ತಿವೆ ಅಲ್ಲಲ್ಲಿ
ಜೀವಿಗೆ ಹಸುವಿನ ಪರಿವೆಲ್ಲ !

ಶಿವ-ಶಕ್ತಿಯ ಸಂತಸ ತಾಣ ಧಾರ್ಮಿಕ ಮೂರ್ತಿಯ
ತಪೋದಾಣ ಬಿಸುವ ಗಾಳಿಯ ಮಂಜುಳ ಗಾನ
ನಿಸರ್ಗ ಪ್ರೇಮಿಗೆ ಅಮೃತಪಾನ ಜಂಜಡ ಜೀವಿಗೆ
ಸುಖಶಾಂತಿ ಸಂಸಾರವೇ ಭ್ರಾಂತಿ !

ರಸಿಕಗೆ ನಲಿಯುವ ನಂದನ ಬೆಟ್ಟ ಸಿರಿ ಸೌಂದರ್ಯರ
ಮಣಿ ನೆಲೆಗಟ್ಟು ಕವಿಗಿದು ಕಾವ್ಯದ ಸ್ಫೂರ್ತಿಯ ಸೆಲೆಯು
ದೇವ ಗಂಗೆಯ ಮಂದಾಕಿನಿ ನೆಲೆಯು ವಿಶ್ವ ಚಿತ್ರಿಕನ
ವಿಚಿತ್ರ ಕಲೆಯ ಯಾರವನಿಲ್ಲ ಪ್ರದರ್ಶನಕ್ಕಿಟ್ಟ ?
ಸಗರನಾಡಿನ ಸುಂದರ ಬೆಟ್ಟ !

## ಹೆಮ್ಮೆ ಬೇಡವೆ ನಮಗೆ ಈ ನಾಡ ಕುರಿತು

ಶ್ರೀವೀರಸಂಗಪ್ಪ ಹಗರಟಗಿ. ಬಿ.ಎ.

ಸಗರನಾಡಿ ಕೀರ್ತಿ ಹೊಗಳಿ ಹಾಡುವೆನಿಲ್ಲಿ
ಜಗವು ಅರಿಯಲ್ಲಿ ಸ್ಮರಿಸಿ ನಿತ್ಯ ನಿತ್ಯ
ಗುಡ್ಡವಾಗಿಹ ಸುತ್ತು ಕಾಣದಿರೆ ಒಮ್ಮೆ
ಮೂಡಿ ಬಾರದೆ ಇಹದೇ? ಅದು ಒಮ್ಮೆ ಮತ್ತೆ ||೧||

ಜೇವರಗಿ ಶಹಪೂರ ಸುರಪುರ ಈ ಕ್ಷೇತ್ರ
ಮೂರಲೋಕದ ಸಿರಿಯೇ ಇಲ್ಲಿ ಮೂಡುಹುದು
ಕಣ್ಣು ಬಿರಿದೊಡತ್ತ ಕೈಲಾಸವಾಗಿರುವ
ದೇವಾತಣದ ಘನತೆ ಗಗನಕೇರಿಹುದು ||೨||

ಆತ್ಮ ಚೈತನ್ಯವನೆ ಯುಗಯುಗಾದಿ ಮೆರೆದಿರುವ
ಆದಿ ಪುರುಷರ ನೆಲೆಯೆ ಈ ಪುಣ್ಯ ನೆಲವು
ದೇವನೊಲಿಸಿಹ ನಾವು ಗಂಗೆಯನು ಧರೆಗೆಳೆದ
ಭಗಿರಥ ಯತ್ನದ ಆ ಛಲವು ಬಲವು ||೩||

ನಂಬಿ ನೆಲೆಸಿಹನಿಲ್ಲಿ ಕೆಂಭಾವಿ ಭೊಗಣ್ಣ
ಮಗ್ಗದಲ್ಲಿ ಸಗ್ಗವನು ಕಂಡ ದಾಸಯ್ಯ
ಸಾಧು ಸಂಕುಳದಿಂದ ಶಿವಲೋಕ ಸಮವಾದ
ದೇವಗಣ ತಿಂಥಿಣಿಯ "ಮೌನದ ಅಯ್ಯ" ||೪||

ಜಗದ ಜನ ಮನವನ್ನು ಭಕ್ತಿಯಿಂ ತಣಿಸುತಿಹ
ದಿವ್ಯ ದಾರಿಯನೀವ ಆ ಸುರರ ಸೋಲು
ಗುಡ್ಡ ಗಾಡಾಗಿರುವ ಚೆಲುವನಲುವಿನ ತಾಣ
ಕೈಮಾಡಿ ಕರೆಯುತಿಹೆ 'ಕೊಡೆಯ ಕಲ್ಲು' ||೫||

ದೃಷ್ಟಿ ಬೀರಿದೊಡತ್ತ ದೇವನಿಯದ ನೆಲೆಯು
ಶಿಲ್ಪಕಲೆ ಸೂಸಿರುವ 'ಹಗರಟಗಿ'ಯು
ಬೆಂಗಾಡು ನೆಲಕೆಲ್ಲ ಬೆಳೆನೀಡನಿಂತಿರುವ
ಕೃಷ್ಣಾ ಮೇಲ್ದಂಡೆಯ ಯೋಜನೆಯ ಸಿರಿಯು ||೬||

ದಾರಿಯುದ್ದಕು ಕಾಣ್ಬ ದೇವಗಿರಿಯಂತಿರುವ
ರಮ್ಯ ದೇಗುಲವಿರುವ ಆ ಬೆಟ್ಟವು,
ಗುಳಬಾಳ ಗ್ರಾಮದೆಡೆ ಯಾತ್ರಿಕರ ಮನಸೆಳೆದು
ಸಂತಸದ ಸುರಿಯುತಿಹ ಶುಭದಾಮವು ||೭||

ಸಕಲ ಕಲೆಗಳ ಬೀಡು ಸುರಪುರದ ಸಿರಿನೋಡು
ಗೋಪಾಲನ ಕೊಳಲ ಗಾನದಲಿ ಹಾಡು,
ಲಕ್ಷ್ಮೀಶ ಜನಿಸಿರುವ ದೇವಪುರ ಇಲ್ಲಿಹುದು
ಗೀರ್ವಾಣ ಪುರನಿಲಯವೆನಿಸಿ ಮೆರೆದಿಹುದು ||೮||

ಕೈಲಾಸಪತಿ ಭಕ್ತ ಕಲ್ಲಯ್ಯ ಬಾಳಿರುವ
ಹಾದಿನಾಳೆಂಬೂದು ಹತ್ತಿರವೆ ಇಹುದು
ಅಕ್ಕಪಕ್ಕದ ಹಳ್ಳಿ ಕಕ್ಕೆರಿ ಆ ಗ್ರಾಮ
'ಸೋಮನಾಥ'ನ ಸರಿಸಿ ನಮಿಸಿ ನೋಡು ||೯||

ನಾನು ನನ್ನದು ಎಂಬ ಭವ ಬೀಬಿವನೆ ಹುರಿದು
ನೀನು ನಿನ್ನೊಳ ತಿಳಿದ ಅರುವಿನರುವೆ
ಸ್ವಾನುಭಾವದ ವಿಷಯ ಗಾನದೊಳು ನೀಹಾಡಿ
ಜಗವನುದ್ಧರಿಸುವ 'ಹೆಮ್ಮಡಗಿ ಪ್ರಭುವೇ ! ||೧೦||

ನೆಲಿದಂದ ನಭದೆಡೆಗೆ ಮೇಲಿರಿ ನಿಂತಿರುವ
ಗಿಡಗಂಟಿ ಹೊಂದಿರುವ ಈ ಗಿರಿಯ ಅಂತ
ಮೇಘ ಮಂದಿರದಲ್ಲಿ ಮಳೆದೇವನಿರುವಂತೆ
ಯೋಗ ಶಿಖರದೊಳಗಿರುವ 'ಪರಮಾನಂದ' ||೧೧||

ಕರನೀಡಿ ವರಬೇಡು ಕೊಳ್ಳದೆಲ್ಲವುಳ ಕಂಡು
ಬಂಡಯ್ಯ ಲಿಂಗಯ್ಯರ ಭಜಿಸಿ ಹಾಡು
ತೊಳಗಿ ಬೆಳಗುವ ನಗರ ತಾಳಿಕೋಟಿಯ ಚೆಲುವು
ಗತಕಾಲದೈಸಿರಿಯ ಗಣ್ಯ ಪುರವು ||೧೨||

ಸಗರನಾಡಿನ ಸಮೆ ಸಾಗಿಹುದು ಈಕಡೆಗೆ
ಶೀಲ ಸಂಸ್ಕೃತಿ ಸುರಿದುಸುತ್ತುವರಿದು
ಈಶನವತಾರವೇ ಇಳಿದು ಬಂದಿಹುದಿಲ್ಲ
'ಬಾಸ್ಗತೇಶನ' ಕರುಣೆ ಮೊಳಗುತಿಹುದು. ||೧೩||

ತಿಳಿನೀರ ತಾಯನೆಂದೆ ಇಳಿದು ಬಂದಿಹುದಿಲ್ಲ
ಪುಣ್ಯ ಜಲ ಸೆಲೆಯಾಗಿ ಕವಿಯುತಿಹುದು,
ಕಲ್ಲು ಕನಕವೇ ಆಗಿ ಕಂಗೊಳಿಸುತಿಹುದಿಲ್ಲ
ವಜ್ಜಿಲವೇ ವೈಕುಂಠವೆನಿಸಹತಿಹುದು ||೧೪||

ಜೀವ ಶಿವರೈಕ್ಯವನು ಕಾಯಕದಿ ಕಂಡಿರುವ
ಷಣ್ಮುಖೇಶ್ವರ ನಲಿದೆ ಜೇವರಗಿಯು
ಭಾವ-ಭಕ್ತಿಗಳೆಂಬ ಬಾಹುಗಳ ಬೀಸಿರುವ
ಶಹಪುರದ ಚರಬಸವ ಮಹಾಸ್ವಾಮಿಯಂ ||೧೫||

ಅಂದು ಇಂದು ಮುಂದು ಎಂದೆಂದಿಗೂ ನೀನು
ನೊಂದವರ ಬೆಂದವರ ಬೆನ್ನಿನಾಧಾರ
ಕಂದುಗೊರಳನ ಭಕ್ತ ಕಲಿಯುಗದ ಹಾಸಂತ
ಆದೊಲದು ಶರಮ 'ಕರುಣೇಶ್ವರ' ||೧೬||

ಮೂರು ಬಂಧನ ಹರಿದು ಮೂಲ ಮಂತ್ರವ ತಿಳಿದ
ಅಮರ ಸೌಖ್ಯದಿ ಬೆರೆತ ಆತ್ಮಾನಂದ
ಸಿಂಹವಾಹಿನಿ ಭಕ್ತ ಶಿವಶಕ್ತಿ ಪಡೆದಾತ
ಗಂವ್ಹಾರದ ತ್ರಿವಿಕ್ರಮಾನಂದ ||೧೭||

ಮರಳಿ ಹುಟ್ಟಿದ ಹಾಗೆ ಅರಿತು ಬಾಳಿದ ವೀರ
ಕರವಿಡಿದು ಆ ಹಾದಿ ನಡೆಸು ಬಾರಯ್ಯ
ಮಳ್ಳಿಗ್ರಾಮದಿ ಹುಟ್ಟಿ ಒಳ್ಳೆಮಾವನೆನೆಸಿ
ತಿಳಿವಿನಾಲಯವಾಸಿ ತುಳಜಪ್ಪಯ್ಯ ||೧೮||

ಸುಖದ ಅರ್ಥವನರಿತ ಶಿವಯೋಗದಲಿ ಬೆರೆತ
ಪರಮಾರ್ಥ ಸವಿಯುಂದ ಯೋಗೀಸ್ವರ
ಭವದ ಬಂಧನ ಹರಿದ ಶಿವನೊಳಗೆ ಒಂದಾದ
ಶಾಕಾಪುರದ ಶ್ರೀ ಸಿದ್ದರಾಮೇಶ್ವರ ||೧೯||

ಇಳೆಯ ಬದುಕಿನ ನೆಲೆಯ ಅಳೆದುಕೊಂಡವನೀತ
ಬಯಲೊಳಗೆ ಬೆರೆತಿರುವ ನೀ ಪಡೆದ ವಿದ್ಯೆ
ಜ್ಞಾನಕೊಳದಲ್ಲಿ ನವಿವ ಪುರವಹಂಸನು ನೀನು
ತುಮಕೂರು ತಾಪಸಿಯೇ ಭೋ ವಿಶ್ವರಾಧ್ಯ ||೨೦||

ಕಂಗಳೇತಕೆ ನಮ್ಮ ಕಾಣದಿರಿ ಈ ಕ್ಷೇತ್ರ
ಕಲ್ಲಿನಾಥ ಕಂಡು ಬಂದೊಮ್ಮೆ ನಮಿಸು
ಪರಮ ಪ್ರಾಚೀನತೆಯ ಇತಿಹಾಸ ಇಲ್ಲಿಹುದು
ಕನ್ಯೆ ಕೊಳೂರಿನ ಮುಗ್ಧ ಕೊಡಗೂಸು ||೨೧||

ಇಂತು ಸಂಪದಿಂದ ಕೂಡಿರುವ ನೆಲಜಲದಿ
ಜನಿಸಿರುವ ನಮಗೆಲ್ಲ ಈ ಹರುಷ ಏನಿತು ?
ಶೂರ ಧೀರರು ನಾವು ಶರಣ ಸಂತತಿಯೆನಿಸಿ
ಹೆಮ್ಮೆ ಬೇಡವೆ ನಮಗೆ ಈ ನಾಡ ಕುರಿತು ?

## ಶ್ರೀಮಂತ ವರರಾಣಿ ರಂಗಮ್ಮನವರು !

ದಿ. ಭೀಮಕವಿ ರಸ್ತಾಪುರ

ಶ್ರೀಮಂತ ವರರಾಣಿ ರಂಗಮ್ಮನವರು
ಈ ಮಹಾ ಸುರುಪುರಕ್ಕೆ ಅಧ್ಯಕ್ಷರಿರುವರು
ಭೂಮಿಶ ವೆಕಂಟೇಂದ್ರನ ಪತ್ನಿಯೆವರು
ಪ್ರೇಮದಲಿ ಯಮನ್ನು ಕಾಪಾಡುತಿಹರಹು ||೧||

ಸಾರ ಸದ್ಗುಣಯುಕ್ತಿ ಸಂಪೂರ್ಣರಿವರು
ಭೂರಿ ಸತ್ಕೀರ್ತಿಯು ಪಡೆದು ಮೆರೆಯುವರು
ಭೈರಿ ಬಲವಂತಗಾರನೆಯ ರಾಣಿಯವರು
ಧಾರೂಣಿಯೊಳ್ಳಕೂರಿಗೆ ಇವರೆ ಮಾಲಿಕರು ||೨||

ಲೋಕಹಿತ ನ್ಯಾಯದಿಂ ಕಾರಭಾರಿಗಳನು
ಏಕಚಿತ್ತದಿ ನೆಮಿಸುತ್ತಿಹರು ರಸಿಕರನು
(ಸಾಕಾರದಿಂ ಸಲೆ) ಕೇಳುತಲಿ ಸಾರ್ವಜನಿಕರನು
(ಸಹಕಾರದಿಂ ಸಲಹೆ ಕೇಳುತಲಿ ಸಾರ್ವಜನಿಕರನು)
ಜೋಕೆಯಿಂ ಪೊರೆದು ಪೊಂದಿದರು ಕಿರ್ತಿಯನು ||೩||

ಶ್ರೀಮಂತ ಕೃಷ್ಣಪ್ಪನಾಯಕರನು ನೋಡಿ
ಆ ಮೊದದಿಂ ಕರೆದು ಸಂಭ್ರಮದಿ ಕೂಡಿ
ಕಾಮಿಸಿ ಪಡೆದ ಸುತನೆಂದು ಮುದ್ದಾಡಿ
ನೆಮಿಸಿದಳಧಿಕಾರವಿತ್ತು ಮಾತಾಡಿ ||೪||

ಧೀರ ಕೃಷ್ಣಪ್ಪನಾಯಕೆಂದ್ರಾಗಮಿಸಿ
ಸಾಗರ ಸುವಿಚಾರದಿಂ ಪ್ರಜೆಗಳನು ಕರೆಸಿ

ತಾರತಮ್ಯದ ಸುಭೋಧವನು ಸತಿ ಗ್ರಹಿಸಿ
ತೋರಿದವರ್ಗೆ ಸನ್ಮಾರ್ಗ ನಿಶ್ಚೈಸಿ ||೫||
ಕೃಷ್ಣಪ್ಪನಾಯಕಂಜಗಂಭೀರ
ಕಷ್ಟ ಕಾರ್ಪಣ್ಯಗಳ ಕೇಳುವನು ಧೀರ
ದುಷ್ಟ ಜನರನು ಸೇರದಿರ್ಪನವ ಧೀರ
ನಿಷ್ಠೆಯಿಂ ಪ್ರಜೆಗಳನ್ನು ರಕ್ಷಿಸುವಾ ಪೂರು ||೬||

ಇವರ ಆಳುವಿಕೆ ಚಿರಕಾಲವಿರಲೆಂದು
ಇವರ ಸತ್ಕೀರ್ತಿ ಪಸರಿಸಿ ಮೆರೆಯಲೆಂದು
ಕವಿಕುವರ ನಾನಿನ್ನು ಅಸಮಬಲನೆಂದು
ದೇವಪುರ ಲಕ್ಷ್ಮೀಶನ ಹೆಸರು ಮೆರೆಯಲೆಂದು ||೭||

ಧರೆಯೊಳಗೆ ದೇವದೇವನ ಪ್ರಾರ್ಥನೆಯನು
ಸರದಿಂ ಗೈದು ಬೇಡುವೆವು ವರವನ್ನು
ಚಿರಕಾಲವಿಯರಿ ಇವರಿಗೆ ಮಗಲವನು
ದೊರೆಗಳು ಅನುದಿನದಿ ಪಾಲಸಲಯಮ್ಮನ್ನು ||೮||

ಈ ದೊರೆಗಳಿಂದ ಕವಿಯೆಂಬ ನಾಮವನು
ಮೋದದಿಂ ಪಡೆದ ''ಭೀಮಾಭ್ಯ'' ನೆಂಬುವನು
ಮೇದಿನಿಯೊಳೀ ಚೌಪದಿ ಪೇಳಿದನು
ಸಾಧುಗುರು 'ಶಂಕರ'ನ ಪಾಡಿ ಭಜಿಸಿದನು ||೯||

## ಮಾಹಿತಿ

## ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ

**ಪರಿಶಿಷ್ಟ ವರ್ಗಗಳ ಕಲ್ಯಾಣ ಕಾರ್ಯಕ್ರಮಗಳ ವಿವರಗಳು ಶೈಕ್ಷಣಿಕ ನೆರವಿನ ಯೋಜನೆಗಳು**

**೧. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು**

ಪರಿಶಿಷ್ಟ ವರ್ಗದವರ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಶಾಲೆಗೆ ಹೋಗುವ ಅಭ್ಯಾಸ ರೂಢಿಸಲು ಈ ಯೋಜನೆ ರೂಪಿಸಲಾಗಿದೆ. ಮೂರರಿಂದ ಐದು ವರ್ಷ ವಯಸ್ಸಿನ ಮಕ್ಕಳು ಇಂತಹ ಕೇಂದ್ರದಲ್ಲಿ ಪ್ರವೇಶ ಪಡೆಯಲು ಅರ್ಹರಾಗಿರುತ್ತಾರೆ. ಪ್ರತಿ ಕೇಂದ್ರದಲ್ಲಿ ೫೦ ಮಕ್ಕಳಿಗೆ ಪ್ರವೇಶ ಅವಕಾಶ ಇರುತ್ತದೆ.

**೨. ಆಶ್ರಮ ಶಾಲೆಗಳು**

ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಆಶ್ರಮ ಶಾಲೆಗಳನ್ನು ಸ್ಥಾಪಿಸಲಾಗಿದೆ. ವಿಧ್ಯಾರ್ಥಿಗಳಿಗೆ ಉಚಿತ ಊಟ ಸಮವಸ್ತ್ರ ಪುಸ್ತಕ, ಲೇಖನ ಸಾಮಾಗ್ರಿ ಇತ್ಯಾದಿ ಅನೇಕ ಸವಲತ್ತು ಒದಗಿಸಲಾಗುವುದು. ಈ ಆಶ್ರಮ ಶಾಲೆಗಳಲ್ಲಿ ಓದುವ ಮಕ್ಕಳಿಗೆ ೧ ರಿಂದ ೫ನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಲು ಅವಕಾಶವಿದೆ. ಗ್ರಾಮಾಂತರ ಪ್ರದೇಶದ ಸುತ್ತಮುತ್ತಲಿನ ಪರಿಶಿಷ್ಟ ವರ್ಗದ ಮಕ್ಕಳು ಈ ಶಾಲೆಗೆ ಸೇರಬಹುದು. ಮಕ್ಕಳ ವಯೋಮಿತಿ ಕನಿಷ್ಟ ೬ವರ್ಷಗಳಿರಬೇಕು.

**೩. ರಾಮಕೃಷ್ಣ ಆಶ್ರಮದಂತಹ ಗೌರವಾನಿತ್ವ ವಿದ್ಯಾ ಸಂಸ್ಥೆಯಲ್ಲಿ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಪ್ರವೇಶ.**

ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳು ಉತ್ತಮವಾದ ವಿದ್ಯಾಭ್ಯಾಸ ಪಡೆಯಲು ಅನುಕೂಲವಾಗವಂತೆ ಮೈಸೂರಿನ ರಾಮಕೃಷ್ಣ ಆಶ್ರಮಕ್ಕೆ ಪ್ರತಿ ವರ್ಷ ೨೫ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡಲಾಗುವುದು. ವಿದ್ಯಾರ್ಥಿಗಳು ಪರಿಶಿಷ್ಟ ವರ್ಗದವರಾಗಿರಬೇಕು. ಇಲ್ಲಿ ಪ್ರವೇಶ ಪಡೆಯಲು ಪ್ರತಿ ವರ್ಷ ಏಪ್ರೀಲ್

೩೦ರಂದು ನಡೆಸುವ ಲಿಖಿತ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು. ೭ನೇ ತರಗತಿಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿ ೮ನೇ ತರಗತಿಗೆ ಸೇರುವವರಿಗೆ ಮಾತ್ರ ಇಲ್ಲಿ ಅವಕಾಶ ನೀಡಲಾಗುತ್ತದೆ. ಈ ವಿದ್ಯಾಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಎಲ್ಲಾ ಖರ್ಚುಗಳನ್ನು ಪರಿಶಿಷ್ಟ ವರ್ಗದ ಕಲ್ಯಾಣ ನಿರ್ದೇಶನಾಲಯದಿಂದ ಭರಿಸಲಾಗುತ್ತದೆ.

**೪. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ**

೫ರಿಂದ ೧೦ನೇ ತರಗತಿಗಳಲ್ಲಿ ವ್ಯಾಸಂಗ ಮಾಡುವ ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳಿಗೆ ಉಚಿತ ವಸತಿ, ಊಟ, ತಿಂಡಿ, ಪುಸ್ತಕ, ಲೇಖನ ಸಾಮಾಗ್ರಿ, ಉಡುಪು, ಹಾಗೂ ಇನ್ನಿತರ ಅಗತ್ಯ ಪರಿಕರಗಳನ್ನು ಉಚಿತವಾಗಿ ಸೌಕರ್ಯ ಒದಗಿಸಲು ವಿದ್ಯಾರ್ಥಿ ನಿಲಯಗಳನ್ನು ಬಾಲಕ ಮತ್ತು ಬಾಲಕಿಯರಿಗೆ ಪ್ರತ್ಯೇಕವಾಗಿ ಸ್ಥಾಪಿಸಲಾಗಿದೆ. ಗ್ರಾಮಾಂತರ ಪ್ರದೇಶದ ಬಡಕುಟುಂಬದ ಮಕ್ಕಳಿಗೆ ಇದರಿಂದ ಉಪಯೋಗವಾಗುತ್ತಿದೆ. ೫ನೇ ತರಗತಿಗೆ ಪ್ರವೇಶ ಪಡೆಯುವ ಹಾಗೂ ೧೦ನೇ ತರಗತಿಯ ವರೆಗೆ ಓದಲಿಚ್ಛಿಸುವ ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳಾಗಿರಬೇಕು. ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳಾಗಿದ್ದು ಅಂಗೀಕೃತ ವಿದ್ಯಾಸಂಸ್ಥೆಯಲ್ಲಿ ಓದುತ್ತಿರಬೇಕು.

**೫. ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು**

ಮೆಟ್ರಿಕ್ ನಂತರ ಕೋರ್ಸ್‌ಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ಬಾಲಕ ಬಾಲಕಿಯರು ೧೧ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿದೆ. ಪ್ರತಿ ವಿದ್ಯಾರ್ಥಿಗೆ ತಿಂಗಳೊಂದಕ್ಕೆ ರೂ. ೪೫೦.೦೦ ರೂಗಳ ವೆಚ್ಚದಲ್ಲಿ ಊಟ, ತಿಂಡಿ ಒದಗಿಸಲಾಗುವುದು. ಪರಿಶಿಷ್ಟ ವರ್ಗದ ವಿದ್ಯಾರ್ಥಿಯಾಗಿದ್ದು ಭಾರತ ಸರ್ಕಾರದ ವಿದ್ಯಾರ್ಥಿ ವೇತನ ಮಂಜೂರಾತಿಗೆ ಅರ್ಹರಿರಬೇಕು.

**೭. ವಿದ್ಯಾರ್ಥಿ ವೇತನಗಳು**

**ಅ. ೧ರಿಂದ ೪ನೇ ತರಗತಿಗಳಲ್ಲಿ ವಿದ್ಯಾರ್ಥಿ ವೇತನ :** ಕರ್ನಾಟಕ ಸರ್ಕಾರ ೧೯೯೫-೯೬ ನೇ ಸಾಲಿನಿಂದ ೧ರಿಂದ ೪ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳು ಮಧ್ಯದಲ್ಲಿ ಶಾಲೆ ಬಿಡುವುದನ್ನು ತಡೆಗಟ್ಟಲು ಪೋಷಕರಿಗೆ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಉತ್ತೇಜಿಸುವ ಸಲುವಾಗಿ ಪ್ರತಿ ವಿದ್ಯಾರ್ಥಿಗೆ ವಾರ್ಷಿಕ ೭೫.೦೦ ರೂ.ಗಳನ ವಿದ್ಯಾರ್ಥಿ ವೇತನ ನೀಡುವ ಯೋಜನೆ ಜಾರಿಗೊಳಿಸಿವೆ. ಆದಾಯ ಮಿತಿ ಇರುವುದಿಲ್ಲ.

ಆ. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ : ಸರ್ಕಾರಿ ಅಥವಾ ಅನುದಾನಿತ ವಿದ್ಯಾರ್ಥಿ ನಿಲಯಗಳಲ್ಲಿ ಸೌಲಭ್ಯ ಪಡೆಯದ ಪರಿಶಿಷ್ಟ ವರ್ಗಕ್ಕೆ ಸೇರಿದ ಮೆಟ್ರಿಕ್ ಪೂರ್ವ ತರಗತಿಗಳಲ್ಲಿ ಅಭ್ಯಾಸ ಮಾಡುತ್ತಿರುವ

ವಿದ್ಯಾರ್ಥಿಗಳಿಗೆ ಈ ವಿದ್ಯಾರ್ಥಿ ವೇತನ ನೀಡಲಾಗುತ್ತದೆ. ೫ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಓದುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳು ಈ ವಿದ್ಯಾರ್ಥಿ ವೇತನ ಪಡೆಯಲು ಅರ್ಹರಾಗಿರುತ್ತಾರೆ. ವಿದ್ಯಾರ್ಥಿ ವೇತನಕ್ಕೆ ಅರ್ಜಿಗಳನ್ನು ಆಹ್ವಾನಿಸಿದಾಗ ಶಾಲಾ ಮುಖ್ಯೋಪಾಧ್ಯಾಯರ ಮೂಲಕ ಸಂಬಂಧಿಸಿದ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಕಳುಹಿಸಿ ಮಂಜೂರಾತಿ ಪಡೆಯಬೇಕು. ೫ ರಿಂದ ೭ನೇ ತರಗತಿಗಳಿಗೆ ವಾರ್ಷಿಕ ೭೫.೦೦ ರೂ.ಗಳು ಹಾಗೂ ೮ ರಿಂದ ೧೦ನೇ ತರಗತಿಗಳಿಗೆ ವಾರ್ಷಿಕ ೧೦೦.೦೦ ರೂ.ಗಳು ನೀಡಲಾಗುತ್ತಿದೆ.

**೩. ಪ್ರತಿಭಾ ವಿದ್ಯಾರ್ಥಿ ವೇತನ :** ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ವಾರ್ಷಿಕ ಪರೀಕ್ಷೆಗಳಲ್ಲಿ ಉತ್ತಮ ಅಂಕಗಳನ್ನು ಪಡೆಯುವಂತೆ ಪ್ರೋತ್ಸಾಹಿಸಲು ಹಾಗೂ ಅವರಲ್ಲಿ ಆರೋಗ್ಯಕರ ಸ್ಪರ್ಧಾ ಮನೋಭಾವ ತುಂಬುವ ಉದ್ದೇಶದಿಂದ ಪ್ರತಿಭಾ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. ವಿದ್ಯಾರ್ಥಿ ನಿಲಯದಲ್ಲಿ ವಾಸಿಸುವ, ವಾಸಿಸದ ಎಲ್ಲಾ ವಿದ್ಯಾರ್ಥಿಗಳು ಇದಕ್ಕೆ ಅರ್ಹರಾಗಿರುತ್ತಾರೆ. ವಾರ್ಷಿಕ ಪರೀಕ್ಷೆಗಳಲ್ಲಿ ಶೇಕಡಾ ೬೦ಕ್ಕಿಂತ ಹೆಚ್ಚು ಅಂಕ ಪಡೆದಿರುವ ವಿದ್ಯಾರ್ಥಿಗಳು ಪ್ರತಿಭಾ ವಿದ್ಯಾರ್ಥಿ ವೇತನ ಪಡೆಯಲು ಅರ್ಹರಾಗಿರುತ್ತಾರೆ. ೫ರಿಂದ ೭ನೇ ತರಗತಿಗಳಿಗೆ ವಾರ್ಷಿಕ ೭೫.೦೦ ರೂಪಾಯಿಗಳು ಹಾಗೂ ೮ ರಿಂದ ೧೦ನೇ ತರಗತಿಗಳಿಗೆ ವಾರ್ಷಿಕ ೧೦೦.೦೦ ರೂಪಾಯಿಗಳು ನೀಡಲಾಗುತ್ತಿದೆ.

**೮. ಭಾರತದ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ**

ಭಾರತ ಸರ್ಕಾರದ ನಿಬಂಧನೆಗಳ ಮೇರೆಗೆ ಎಲ್ಲಾ ಅರ್ಹ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳು ವಿದ್ಯಾರ್ಥಿ ವೇತನ ಪಡೆಯಲು ಅರ್ಹರಾಗಿರುತ್ತಾರೆ. ವಿದ್ಯಾರ್ಥಿಗಳು ಕುಟುಂಬದ ವಾರ್ಷಿಕ ವರಮಾನ ೪೫,೭೬೦.೦೦ ರೂಪಾಯಿಗಳಿಗೆ ಮೀರದಿದ್ದಲ್ಲಿ, ಪೂರ್ಣ ವಿದ್ಯಾರ್ಥಿ ವೇತನವನ್ನು ಹಾಗೂ ವಾರ್ಷಿಕ ಆದಾಯ ೬೦,೯೫೦.೦೦ ರೂಪಾಯಿಗಳಿಗೆ ಮೀರದ ವಿದ್ಯಾರ್ಥಿಗಳಿಗೆ ಅರ್ಧ ವಿದ್ಯಾರ್ಥಿ ವೇತನವನ್ನು ನೀಡಲಾಗುವುದು. ಈ ವಿದ್ಯಾರ್ಥಿ ವೇತನಕ್ಕೆ ಅರ್ಜಿಗಳನ್ನು ಎಲ್ಲಾ ಕಾಲೇಜುಗಳಲ್ಲೂ ನೀಡಲಾಗುತ್ತದೆ. ಇದನ್ನು ಭರ್ತಿ ಮಾಡಿ ಕಾಲೇಜು ಪ್ರಾಂಶುಪಾಲರ ಮೂಲಕ ತಾಲ್ಲೂಕು ಸಮಾಜ ಅಧಿಕಾರಿಗಳು, ಜಿಲ್ಲಾ ಸಮಾಜದ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಬೇಕು.

**೯. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ**

ಭಾರತ ಸರ್ಕಾರದ ವಿದ್ಯಾರ್ಥಿ ವೇತನಕ್ಕೆ ಅನರ್ಹರಾದ ಮತ್ತು ಪರಿಶಿಷ್ಟ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮುಂದುವರೆಸಲು ಅನೂಕೂಲವಾಗುವಂತೆ ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರು ಮಾಡಲಾಗುತ್ತದೆ.

೧. ವೈದ್ಯಕೀಯ, ತಾಂತ್ರಿಕ ತರಗತಿಗಳ ವಿದ್ಯಾರ್ಥಿಗಳಿಗೆ ಮಾಹೆಯಾನ ೭೫.೦೦ ರೂಪಾಯಿಗಳಂತೆ ೧೦ ತಿಂಗಳಿಗೆ ೭೫೦.೦೦ ರೂಪಾಯಿಗಳು

೨. ಸ್ನಾತಕೋತ್ತರ ತರಗತಿಯಲ್ಲಿ ಅಭ್ಯಾಸಿಸುವವರಿಗೆ ತಿಂಗಳಿಗೆ ೫೦.೦೦ ರೂಪಾಯಿಗಳಂತೆ ೧೦ ತಿಂಗಳಿಗೆ ೫೦೦.೦೦ ರೂಪಾಯಿಗಳು.

೩. ಇತರೆ ಸಾಮಾನ್ಯ ಪದವಿ ತರಗತಿಗಳಲ್ಲಿ ಅಭ್ಯಾಸಿಸುವವರಿಗೆ ತಿಂಗಳಿಗೆ ೪೦.೦೦ ರೂಪಾಯಿಗಳಂತೆ ೧೦ ತಿಂಗಳಿಗೆ ೪೦೦.೦೦ ರೂಪಾಯಿಗಳಂತೆ ವಿದ್ಯಾರ್ಥಿ ವೇತನ ನೀಡಲಾಗುತ್ತದೆ.

ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಾವು ವ್ಯಾಸಾಂಗ ಮಾಡುತ್ತಿರುವ ಕಾಲೇಜುಗಳಲ್ಲಿ ಅರ್ಜಿಯನ್ನು ಪಡೆದು ಭರ್ತಿ ಮಾಡಿ ಕಾಲೇಜು ಪ್ರಾಂಶುಪಾಲರ ಮೂಲಕ ತಾಲೂಕು ಸಮಾಜ ಕಲ್ಯಾಣಾಧಿಕಾರಿಗಲು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಬೇಕು.

೧೦. ನಗದು ಬಹುಮಾನ

ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ಪಬ್ಲಿಕ್ ಪರೀಕ್ಷೆಗಳಲ್ಲಿ ಪ್ರಥಮ ಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರೆ ಅಂತಹ ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡಲಾಗುತ್ತದೆ.

| | |
|---|---|
| ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ | ರೂ. ೫೦೦.೦೦ |
| ೨ನೇ ಪಿ.ಯು.ಸಿ. ವಿದ್ಯಾರ್ಥಿಗಳಿಗೆ | ರೂ. ೭೫೦.೦೦ |
| ಪದವಿ ತರಗತಿ ವಿದ್ಯಾರ್ಥಿಗಳಿಗೆ | ರೂ. ೧೦೦೦.೦೦ |
| ಸ್ನಾತಕೋತ್ತರ ಪದವಿ ಎಂ.ಎ., ಎಂ.ಎಸ್ಸಿ, ಎಂ.ಕಾಂ | ರೂ. ೧೨೫೦.೦೦ |
| ತಾಂತ್ರಿಕ, ವೈದ್ಯಕೀಯ, ಕೃಷಿ, ಪಶುವೈದ್ಯ ಪದವಿಗಳು | ರೂ. ೧೫೦೦.೦೦ |

I. ಈ ನಗದು ಬಹುಮಾನಕ್ಕಾಗಿ ಅರ್ಜಿ ಕರೆಯಲಾಗುತ್ತದೆ.

II. ಸಂಸ್ಥೆಯ ಮುಖ್ಯಸ್ಥರ ಮೂಲಕ ಭರ್ತಿ ಮಾಡಿದ ಅರ್ಜಿಗಳನ್ನು ಅಂಕಪಟ್ಟಿಯ ಜೆರಾಕ್ಸ್ ಪ್ರತಿಗಳೊಂದಿಗೆ ಜಾಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಬೇಕು. ಇದರೊಂದಿಗೆ ಜಾತಿ ಪ್ರಮಾಣ ಪತ್ರ ತಪ್ಪದೇ ಲಗತ್ತಿಸಿರಬೇಕು.

**೧೧. ರ್‍ಯಾಂಕ್ ವಿದ್ಯಾರ್ಥಿಗಳಿಗೆ ನಗದು ಬಹುಮಾನ**

ಎಸ್.ಎಸ್.ಎಲ್.ಸಿ., ಪಿ.ಯು.ಸಿ. ಪದವಿ ಮತ್ತು ಸಾರ್ವತ್ರಿಕ ಪರೀಕ್ಷೆಗಳಲ್ಲಿ ಪರಿಶಿಷ್ಟವರ್ಗದ ವಿದ್ಯಾರ್ಥಿಗಳು ಅತ್ಯುತ್ತಮ ಅಂಕ ಪಡೆದು ಉತ್ತೀರ್ಣರಾಗುವಂತೆ ಪ್ರೋತ್ಸಾಹಿಸಲು ಮೇಲ್ಕಂಡ ಪರೀಕ್ಷೆಗಳಲ್ಲಿ ೧ ರಿಂದ

೧೦ ರ್‍ಯಾಂಕ್ ಪಡೆದ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳಿಗೆ ಹಾಗೂ ಸ್ನಾತಕೋತ್ತರ ಪದವಿಯಲ್ಲಿ ೧ರಿಂದ ೩ನೇ ರ್‍ಯಾಕ್ ಪಡೆಯುವ ವಿದ್ಯಾರ್ಥಿಗಳಿಗೆ ೫೦೦೦.೦೦ ರೂಪಾಯಿಗಳು.

ಪರಿಶಿಷ್ಟ ಪಂಗಡದ ರ್‍ಯಾಂಕ್ ವಿಜೇತ ವಿದ್ಯಾರ್ಥಿಗಳು ಅರ್ಜಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು. ಅರ್ಜಿಯೊಂದಿಗೆ ಅಂಕಪಟ್ಟಿಯ ನಕಲು, ವಿದ್ಯಾಸಂಸ್ಥೆಯ ಮುಖ್ಯಸ್ಥರು ನೀಡಿದ ದೃಢೀಕರಣ ಪತ್ರ, ಜಾತಿ ಪ್ರಮಾಣ ಪತ್ರಗಳನ್ನು ಲಗತ್ತಿಸಿರಬೇಕು.

**೧೨. ಎಂ.ಫಿಲ್. ಮತ್ತು ಪಿಹೆಚ್.ಡಿ. ವಿದ್ಯಾರ್ಥಿಗಳಿಗೆ ಫೆಲೋಶಿಪ್**

ರಾಜ್ಯದಲ್ಲಿ ಕೃಷಿ ವಿಶ್ವವಿದ್ಯಾಲಯವೊ ಸೇರಿದಂತೆ ಒಟ್ಟು ಒಂಭತ್ತು ವಿಶ್ವವಿದ್ಯಾಲಯಗಳಿದ್ದು, ಈ ವಿಶ್ವವಿದ್ಯಾಲಯಗಳಲ್ಲಿ ವಿವಿಧ ವಿಷಯಗಳಲ್ಲಿ ಸಂಶೋಧನೆಗೆ ತೊಡಗಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಸಂಶೋಧನೆ, ಮಾಹಿತಿ ಸಂಗ್ರಹಣ ಮುಂತಾದವುಗಳಿಗೆ ಹೆಚ್ಚಿನ ವೆಚ್ಚ ಭರಿಸಬೇಕಾಗುತ್ತದೆ. ಆದ್ದರಿಂದ ಎಂ.ಫಿಲ್. ಮಾಡುತ್ತಿರುವ ವಿದ್ಯಾರ್ಥಿಗಳಿಗೆ ೮೦೦೦.೦೦ ಮತ್ತು ಪಿಹೆಚ್.ಡಿ. ಮಾಡುತ್ತಿರುವ ವಿದ್ಯಾರ್ಥಿಗಳಿಗೆ ೧೦,೦೦೦.೦೦ ರೂಪಾಯಿಗಳನ್ನು ಇಲಾಖೆಯ ವತಿಯಿಂದ ನೀಡಲಾಗುತ್ತದೆ.

**೧೩. ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಪ್ರವೇಶ ಪಡೆಯುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಧನ ಸಹಾಯ.**

ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಪ್ರವೇಶ ಪಡೆಯುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಧನ ಸಹಾಯ ನೀಡಲಾಗುವುದು.

೧. ಈ ಯೋಜನೆಯಲ್ಲಿ ಪ್ರಯೋಜನೆ ಪಡೆಯಲು ವಿದ್ಯಾರ್ಥಿಯು ಕರ್ನಾಟಕ ರಾಜ್ಯದ ಮೂಲ ನಿವಾಸಿಯಾಗಿದ್ದು, ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.

೨. ರಾಜ್ಯದ ಯಾವುದೇ ಅಂಗೀಕೃತ ವಿಶ್ವವಿದ್ಯಾಲಯದ ಯಾವುದೇ ವಿಭಾಗದಲ್ಲಿ ಪದವಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇಕಡಾ ೬೦ ಅಂಕಗಳಿಸಿರಬೇಕು. ವಿದೇಶದ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಅಭ್ಯರ್ಥಿಯು ಆಯ್ಕೆಯಾಗಿರಬೇಕು.

೩. ನಿಯೋಜನೆಗೆ ಆಯ್ಕೆಯಾದ ವಿದ್ಯಾರ್ಥಿಯು ವಿಶ್ವವಿದ್ಯಾಲಯದಲ್ಲಿ ಶಿಕ್ಷಣವನ್ನು ಪೂರ್ಣಗೊಳಿಸಲು ಬದ್ಧನಾಗಿರಬೇಕು. ಮಧ್ಯದಲ್ಲಿ ಶಿಕ್ಷಣವನ್ನು ತೊರೆದ ಪಕ್ಷದಲ್ಲಿ ಸರ್ಕಾರದಿಂದ ಮಾಡಿರುವ ವೆಚ್ಚವನ್ನು ಭರಿಸಿ ಕೊಡಬೇಕು. ವ್ಯಾಸಂಗವನ್ನು ಪೂರ್ಣಗೊಳಿಸಬೇಕು.

೪. ಆಯ್ಕೆಯಿಂದ ಅಭ್ಯರ್ಥಿಯು ಕುಟುಂಬದ ಯಾವುದೇ ಸದಸ್ಯರು ವಿದೇಶದಲ್ಲಿ ನೆಲೆಸಿರಬಾರದು ಆಯ್ಕೆಯಾಗುವ ಅಭ್ಯರ್ಥಿಯ ವಯಸ್ಸು ತರಬೇತಿಯ ಪ್ರಾರಂಭದಲ್ಲಿ ೩೦ ವರ್ಷಗಳಿಗಿಂತ ಮೀರಬಾರದು.

೧೪. ಪುಸ್ತಕ ಭಂಡಾರ

ವೈದ್ಯಕೀಯ, ತಾಂತ್ರಿಕ ಮತ್ತು ವೃತ್ತಿಪರ ವಿಷಯಗಳು ಕೃಷಿ ವಿಜ್ಞಾನ, ಪಶು ವಿಜ್ಞಾನ, ಕಾಲೇಜುಗಳಲ್ಲಿ ಅಭ್ಯಾಸಿಸುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ನಿಗದಿ ಪಡಿಸಿರುವ ಪಠ್ಯ ಪುಸ್ತಕ ಮತ್ತು ಇತರ ಉಪಯುಕ್ತ ಪುಸ್ತಕಗಳನ್ನು ಕೇಂದ್ರ ಪುರಸ್ಕೃತ ಯೋಜನೆಯಡಿ ಆಯಾ ಕಾಲೇಜುಗಳಲ್ಲಿ ಸ್ಥಾಪಿಸಲಾಗುವುದು. ಇದರಿಂದ ಬೇಕಾದ ಪುಸ್ತಕ ಪಡೆದು ಉಪಯೋಗಿಸಿಕೊಂಡು ನಂತರ ಬುಕ್ ಬ್ಯಾಂಕಿಗೆ ಅದನ್ನು ಹಿಂತಿರುಗಿಸಬೇಕು.

೧೫. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿ ವೇತನ

ಪ್ರೌಢ ಶಾಲೆಗಳಲ್ಲಿ ವ್ಯಾಸಾಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿನಿಯರ ಸಂಖ್ಯೆ ಗಮನಾರ್ಹವಾಗಿ ಕಡಿಮೆಯಾಗಿರುವುದರಿಂದ ಇನ್ನು ಮುಂದೆ ಈ ಹೆಣ್ಣು ಮಕ್ಕಳು ಹೆಚ್ಚಿನ ಸಂಖ್ಯೆ ಉತ್ತೇಜಿಸಲು ಹೆಚ್ಚುವರಿಯಾಗಿ ವಾರ್ಷಿಕ ೫೦೦.೦೦ ರೂಪಾಯಿಗಳ ವಿದ್ಯಾರ್ಥಿವೇತನ ನೀಡಲಾಗುತ್ತವೆ.

೧೬. ಅಧ್ಯಯನ ಪ್ರವಾಸಕ್ಕೆ ನೆರವು

ತಾಂತ್ರಿಕ ಮತ್ತು ಇತರ ವೃತ್ತಿಪರ ವಿಷಯಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸ ಕಡ್ಡಾಯವಾಗಿದ್ದರೆ ಅಂತಹ ವಿದ್ಯಾರ್ಥಿಗೆ ಪ್ರವಾಸ ಕೈಗೊಳ್ಳುವುದು ಆರ್ಥಿಕವಾಗಿ ಕಷ್ಟವಾಗಬಹುದು. ಆದ್ದರಿಂದ, ಈ ಯೋಜನೆಯಲ್ಲಿ ಪ್ರತಿ ವಿದ್ಯಾರ್ಥಿಗೆ ಅಧ್ಯಯನ ಪ್ರವಾಸ ವೆಚ್ಚವಾಗಿ ರೂ. ೧೦೦೦.೦೦ ರೂಪಾಯಿಗಳು ನೀಡಲಾಗುವುದು. ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಮ್ಮ ಅಧ್ಯಯನ ಪ್ರವಾಸದ ವಿವರಣೆಗಳನ್ನು ವಿದ್ಯಾಸಂಸ್ಥೆಯ ಮುಖ್ಯಸ್ಥರ ಮೂಲಕ ಮಂಜುರಾತಿಗೆ ಕಳುಹಿಸಬೇಕು. ಪ್ರವಾಸ ನಂತರ ಪ್ರವಾಸ ಕೈಗೊಂಡ ವಿದ್ಯಾರ್ಥಿಗಳು ಆ ಬಗ್ಗೆ ವಿದ್ಯಾ ಸಂಸ್ಥೆಯ ಮುಖ್ಯಸ್ಥರಿಂದ ದೃಢೀಕರಿಸಿದ ವೆಚ್ಚದ ಪಟ್ಟಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಬೆಕು.

೧೭. ತರಬೇತಿ

ಪರಿಶಿಷ್ಟ ವರ್ಗಗಳಿಗೆ ಸೇರಿದ ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ಉದ್ಯೋಗ ಸ್ವಯಂ ಉದ್ಯೋಗ ಕೈಗೊಳ್ಳಲು ನೆರವಾಗುವಂತೆ ವಿವಿಧ ಭಾಗಗಳಲ್ಲಿ ತರಬೇತಿ ನೀಡಲಾಗುತ್ತದೆ.

ಬೆರಳಚ್ಚು ಮತ್ತು ಶೀಘ್ರ ಲಿಪಿಯಲ್ಲಿ ತರಬೇತಿ : ಬೆರಳಚ್ಚು ಮತ್ತು ಶೀಘ್ರ ಲಿಪಿಯಲ್ಲಿ ತರಬೇತಿ ಪಡೆಯಲು ಇಚ್ಛಿಸುವ ಪರಿಶಿಷ್ಟ ವರ್ಗಗಳಿಗೆ ಸೇರಿದಂತಹ ಅಭ್ಯರ್ಥಿಗಳಿಗೆ ಕೆಳಕಂಡಂತೆ ಆರ್ಥಿಕ ನೆರವು ಒದಗಿಸಲಾಗುವುದು ವಾಣಿಜ್ಯ ಸಂಸ್ಥೆಗಳಿಗೆ ತರಬೇತಿ ಶುಲ್ಕವನ್ನು ಸಹ ನೀಡಲಾಗುತ್ತದೆ.

## ೧೮. ಕಾನೂನು ಪದವೀಧರರ ಶಿಷ್ಯವೇತನ

ಪರಿಶಿಷ್ಟ ಪಂಗಡಗಳಿಗೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ಹೆಚ್ಚು ಜ್ಞಾನ ಗಳಿಸಿಕೊಳ್ಳಲು ನೆರವಾಗುವಂತೆ ತರಬೇತಿ ನೀಡಲಾಗುತ್ತದೆ. ಈ ತರಬೇತಿಯ ಅವಧಿಯು ನಾಲ್ಕು ವರ್ಷದ್ದಾಗಿದೆ. ತರಬೇತಿಯ ಅವಧಿಯಲ್ಲಿ ತಿಂಗಳಿಗೆ ರೂ. ೧೦೦೦.೦೦ ದಂತೆ ಶಿಷ್ಯ ವೇತನ ನೀಡಲಾಗುವುದು. ಅಭ್ಯರ್ಥಿಯು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು ಹಾಗೂ ಕಾನೂನು ಪದವೀಧರರಾಗಿರಬೇಕು.

## ೧೯. ಕಾನೂನು ಪದವೀಧರರ ಧನ ಸಹಾಯ

ಪರಿಶಿಷ್ಟ ಪಂಗಡಕ್ಕೆ ಸೇರಿದ ನಿರುದ್ಯೋಗಿ ಕಾನೂನು ಪದವಿಧರರು ಸ್ವತಂತ್ರವಾಗಿ ವಕೀಲ ವೃತ್ತಿಯನ್ನು ಕೈಗೊಳ್ಳಲು ಹಾಗೂ ವಕೀಲರ ಸಂಘದಲ್ಲಿ ತಮ್ಮ ಹೆಸರನ್ನು ನೊಂದಾಯಿಸಿಕೊಳ್ಳಲು ಸಹಾಯವಾಗುವಂತೆ ೫೦೦೦.೦೦ ರೂಪಾಯಿಗಳ ಧನ ಸಹಾಯವನ್ನು ನೀಡಲಾಗುತ್ತದೆ.

## ೨೦. ಸ್ವಯಂ ಉದ್ಯೋಗ ತರಬೇತಿ ಕಾರ್ಯಕ್ರಮ (ಮೋಟಾರು ವಾಹನ ತರಬೇತಿ)

ಪರಿಶಿಷ್ಟ ವರ್ಗಕ್ಕೆ ಸೇರಿದ ನಿರುದ್ಯೋಗಿ ಯುವಜನರು ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲವಾಗುವಂತೆ ಜಿಲ್ಲಾವಲಯ ಯೋಜನೆಯಡಿಯಲ್ಲಿ ಲಘು ವಾಹನ ಚಾಲನೆ ಮತ್ತು ಆಟೋ ರಿಕ್ಷಾ ಚಾಲನೆಯಲ್ಲಿ ೧ ತಿಂಗಳ ತರಬೇತಿ ನೀಡಿ ನಂತರ ವಾಹನ ನಡೆಸಲು ಪರವಾನಿಗಿ ಸಹ ಒದಗಿಸಲಾಗುತ್ತದೆ. ತರಬೇತಿ ಅವದಿಯಲ್ಲಿ ರೂ. ೧೫೦.೦೦ ರಿಂದ ೩೦೦.೦೦ ಶಿಷ್ಯವೇತನ ನೀಡಲಾಗುವುದು.

## ೨೧. ರುದ್ರ ಭೂಮಿಗಾಗಿ ಭೂ ಸ್ವಾಧೀನ ವೆಚ್ಚ

ಪರಿಶಿಷ್ಟ ವರ್ಗದವರ ಕಾಲೋನಿಗಳಲ್ಲಿನ ಜನರಿಗೆ ರುದ್ರಭೂಮಿಯನ್ನು ಒದಗಿಸಲು ಭೂ ಸ್ವಾಧೀನ ಮತ್ತು ಸಂಬಂಧ ಪಟ್ಟ ವೆಚ್ಚಗಳನ್ನು ಭರಿಸಲಾಗುವುದು.

## ಸುರಪುರ ರಾಜ್ಯ ಆಳಿದ ಬೇಡ ಮಹಿಳಾ ರಾಣಿಯರು

ವಾಗಿನಗೇರಿ ತರುವಾಯ ಸುರಪುರ ಸಂಸ್ಥಾನವನ್ನು ಆಳಿದ ರಾಜ ಮನೆತನದಲ್ಲಿ ನಲ್ವತ್ತೆಂಟು ಜನ ರಾಣಿಯರಿದ್ದರು. ಅಧಿಕೃತವಾಗಿ ಮತ್ತು ರಾಜ ಪ್ರತಿನಿಧಿಯಾಗಿ ಸುರಪುರ ಸಂಸ್ಥಾನವನ್ನು ಆಳಿ ಮುನ್ನಡೆಸಿದ ಕೀರ್ತಿ ಇಲ್ಲಿಯ ರಾಣಿಯರದು ಎನ್ನುವುದು ಗಮನಾರ್ಹ.

ಒಬ್ಬ ಅರಸನಿಗೆ ಪಟ್ಟದರಸಿ ಇರವುದು ಒರ್ವಳೆ ಮಾತ್ರ. ಉಳಿದವರನ್ನು ಪತ್ನಿ ಉಪಪತ್ನಿಯರೆಂದು, ಸಂಸ್ಥಾನದ ಅಧ್ಯಯನದ ದೃಷ್ಟಿಯಿಂದ ವಿಂಗಡಿಸಿಕೊಳ್ಳಬಹುದೆನಿಸುತ್ತದೆ. ಅರಸರ ತರುವಾಯ ಅಲ್ಲಿಯ

ಅರಸೊತ್ತಿಗೆಯ ಅಧಿಕಾರ ಪಟ್ಟದ ಅರಸಿಗೆ ಮಾತ್ರ ಪ್ರಾಪ್ತವಾಗುತ್ತವೆ. ಅದಕ್ಕಾಗಿ ಪಟ್ಟದರಸಿ ಸ್ಥಾನಕ್ಕಾಗಿ ಬಾರಿ ಪೈಪೋಟಿಯೇ ಇತ್ತು. ಉಪಪತ್ನಿಯರಿಗೆ ರಾಜ್ಯದಲ್ಲಿ ಅಧಿಕಾರ ಚಲಾಯಿಸುವ ಹಕ್ಕು ಇರಲಿಲ್ಲ.

ಸುರಪುರ ಸಂಸ್ಥಾನವು ಆರಂಭದ ಕಾಲಕ್ಕೆ ದತ್ತಕ ಪುತ್ರರ ಮೇಲೆಯೆ ಬಹಳಷ್ಟು ಅವಲಂಭಿಸಿತ್ತು. ಗಡ್ಡಿ ಪಿಡ್ಡನಾಯಕರಿಗೆ ಆರು ಜನ ಹಾಗೂ ಹರಸಂಗಿ ಪಾಮನಾಯಕರಿಗೆ ಐದು ಜನ ರಾಣಿಯರಿದ್ದರು. ದುರ್ದೈವದಿಂದ ಸಂತಾನ ಭಾಗ್ಯ ಸಿಗಲಿಲ್ಲ. ಆಗ ಗುಡುಗುಂಟಿಯ ಪಿಡ್ಡನಾಯಕರನ್ನು ದತ್ತು ಪುತ್ರರನ್ನಾಗಿ ಪಡೆದು ಆತನನ್ನು ವಾಗಿನಕೇರಿ ಕಿಲ್ಲೆಯ ಪಾರುಪತ್ಯ ದಾರನೆಂದು ಪಟ್ಟಗಟ್ಟಲಾಯಿತು. ಪಟ್ಟಗಟ್ಟಿದು ಕೆಲವೇ ದಿನಗಳಲ್ಲಿ ಹಸರಂಗಿ ಪಾಮನಾಯಕನ ಪತ್ನಿ ಲಕ್ಷ್ಮಮ್ಮನ ಉದರದಿಂದ ಜಕ್ಕಪ್ಪನಾಯಕ ಜನಿಸಿದ. ಇದೇ ಆಧಾರವಿಡಿದು ಪಟ್ಟದರಸಿ ರಾಣಿ ಅಮ್ಮನಾಗಲೆ ಎರಡು ವರ್ಷ ರಾಜ್ಯ ಪ್ರತಿ ನಿಧಿಯಾಗಿ ವಾಗಿನಕೇರಿ ಕಿಲ್ಲೆಯನ್ನು ವೈಭವದಿಂದ ಆಳಿದ ಬಗ್ಗೆ ದಾಖಲೆಗಳಿವೆ. ಪಾಮನಾಯಕನಿಗೆ ವೃದ್ಧಾಪ್ಯ ಆವರಿಸಿದಾಗ ದತ್ತಕ ಪುತ್ರರನ್ನು ಪಟ್ಟದಿಂದ ತಳ್ಳಿ ಆಳಿದ ಅಮ್ಮನಾಗತಿಯನ್ನು ಸಂಸ್ಥಾನದ ಇತಿಹಾಸದಲ್ಲೇ ಆಡಳಿತ ನೆಡೆಸಿದ ಮೊದಲನೆ ರಾಣಿ ಎಂಬುದು ಬಹು ಪ್ರಮುಖವಾದ ಅಂಶ ದತ್ತು ಪುತ್ರ ಪಿಡ್ಡ ನಾಯಕನಿಗೆ ಪ್ರಬಲ ವಿರೋಧ ನೀಡಿ ತನ್ನ ತಂಗಿಯ ಮಗ ಜಕ್ಕಪ್ಪ ನಾಯಕನೇ ನಿಜವಾದ ಉತ್ತರಾಧಿಕಾರಿ ಎಂದು ಪಟ್ಟು ಹಿಡದಳು. ಕೊನೆಗೆ ಪಿಡ್ಡನಾಯಕನ ಪ್ರಾಬಲ್ಯ ಹೆಚ್ಚಾದಾಗ ತಾನು ಹಿಡಿದ ಹಠ ಬಿಟ್ಟಳು.

ಇಮ್ಮಡಿ ವೆಂಕಟಪ್ಪ ನಾಯಕನ ಪಟ್ಟದರಸಿ ರಾಣಿ ಕಾಟಮ್ಮ ಸುರಪುರ ರಾಜ್ಯಾಡಳಿತದಲ್ಲಿ ಮೆರೆದ ಮತ್ತೊರ್ವ ಮಹಿಳೆ. ತನ್ನ ಲಕ್ಷ್ಮಮ್ಮ ತೀರಿಕೊಂಡ ತಕ್ಷಣವೇ ಪತ್ನಿಯಿದ್ದವಳು. ಪಟ್ಟದರಸಿಯ ಬಡ್ತಿ ಹೊಂದಿದ್ದಳು. ಲಕ್ಷ್ಮಮ್ಮನ ಉದರದಿಂದ ಹುಟ್ಟಿದ ವೆಂಕಟರಾಗಮಮ್ಮನಯ್ಯ ಮುಂದಿಟ್ಟುಕೊಂಡು. ರಾಜ್ಯಭಾರಗೈಯ್ಯುವ ಪಣತೊಟ್ಟಳು. ಆಗ ಸಂಸ್ಥಾನದಲ್ಲಿ ಕಲಹ ಆರಂಬವಾಯಿತು. ಮಹಿಳೆಗೆ ಮತ್ತೋರ್ವ ಮಹಿಳೆ ರಾಜ್ಯಪ್ರತಿನಿಧಿ ಯಾಗುವುದೆ? ಎಂಬ ಪ್ರತಿಕೂಲ ಪ್ರಶ್ನೆಗಳು ತಲೆಎತ್ತಿದವು. ಈ ಸಂದರ್ಭದಲ್ಲಿ ರಾಣಿ ಕಾಟಮ್ಮನ ಸರ್ವ ವಿಚಾರಗಳಿವೆ. ತಿಮ್ಮಪ್ಪನೆಂಬ ಮಂತ್ರಿ ಮೆದುಳಾಗಿ ಸಹಕರಿಸಿದ ಆದರೆ ಸಂಸ್ಥಾನದ ಸೈನಿಕರು, ಸರದಾರರು ಮುಜುಮದಾರರು ಆಪ್ತೇಷ್ಟರು ಈ ಮಹಿಳಾ ರಾಜ್ಯಕ್ಕೆ ವಿರೋದಿಸಿದರು. ನಿಜಾಮನ ದಬ್ಬಾಳಿಕೆಗೆ ಹಾಗೂ ಬ್ರಿಟಿಷರ ಕಪಟ ನಾಟಕದ ಮದ್ಯೆ ಸಂಸ್ಥಾನದ ಇಂಥ ಅಂತಃಕಲಹವನ್ನು ರಾಣಿ ಕಾಟಮ್ಮ ಎದುರಿಸಲು ಶಕ್ಯವೇ? ಎಂದು ಅವರೆಲ್ಲ ಪ್ರಶ್ನಿಸಿದರು. ರಾಜ್ಯದಲ್ಲಿ ಎರಡು ಬಣಗಳಾಗಿ ಸಿಡಿದು ನಿಂತವು. ಆದರೂ ಕಾಟಮ್ಮ ಹಿಡಿದ ಪಟ್ಟು ಸಡಿಸಲಿಲ್ಲ ಕೊನೆಗೆ ಯಶಸ್ವಿಯಾದ ರಾಣಿ ಧೈರ್ಯ ಸಹಾಸ, ವಿಚಾರ, ವೈವಿದ್ಯ ವ್ಯಕ್ತಿತ್ವವನ್ನು ಮೆಚ್ಚಲೇಬೇಕು. ಇವೆಲ್ಲ ತಂದೆಯಾದ ಅರಸು ರಂಗಪ್ಪನಾಯಕನಿಂದಲೇ ಬಳುವಳಿಯಾಗಿ

ಬಂದಿರಬೇಕು. ಕೊನೆಗೆ ಸಂಸ್ಥಾನದ ಪಟ್ಟಕ್ಕೆ ಉತ್ತರಾಧಿಕಾರಿಯನ್ನು ದೂರದಿಂದ ಊರಿನಿಂದ ತಂದ ಮೇಲೆ ರಾಜಪ್ರತಿನಿಧಿ ಸ್ಥಾನದಿಂದ ರಾಣಿ ಕಾಟಮ್ಮ ನಿವೃತ್ತಗೊಂಡಳು.

ಸಂಸ್ಥಾನದ ಚರಿತ್ರೆಯಲ್ಲಿ ರಾಣಿ ಈಶ್ವರಮ್ಮನ ವಿರೋಚಿತ ವ್ಯಕ್ತಿತ್ವ ಬಹು ವಿಶಿಷ್ಟವಾದುದು ಮೈದುನ ಪಿಡ್ಡನಾಯಕ ಕುತಂತ್ರದಿಂದ ಸಂಸ್ಥಾನ ಸರ್ವ ನಾಶವಾಗುವ ಸಂದರ್ಭವಿತ್ತು. ಆಗ ಸಿಡಿದೆದ್ದು ಬಂದು ರಾಣಿ ಈಶ್ವರಮ್ಮ ಪಿಡ್ಡನಾಯಕನ ಕುತಂತ್ರಕ್ಕೆ ಸಂಸ್ಥಾನವನ್ನು ಬಲಿಕೊಡದಂತೆ ಕಾಪಾಡಿಕೊಂಡು ಬಂದಳು. ಸಂಸ್ಥಾನದ ಸಮಸ್ತ ಬೇಡ ದೊರೆಗಳನ್ನು ಸಂಘಟಿಸಿ ಅಪ್ರಾಪ್ತ ಮತ್ತು ಬಾಲ ವೆಂಕಟನನ್ನು ಪಟ್ಟಕ್ಕೆ ಏರಿಸುವ ಮೂಲಕ ತಾನು ರಾಜ್ಯ ಪ್ರತಿನಿಧಿಯಾದಳು ಧೀರ ಮಹಿಳೆ ಎಂಬ ಬಿರುದು ಪಾತ್ರಳಾದಳು. ಬ್ರಿಟಿಷರ ಪ್ರಬಲ ವಿರೋಧವನ್ನು ಲೆಕ್ಕಿಸದೆ ಸ್ವಾಭಿಮಾನ ಪ್ರಕಟಿಸಿದ ಸಮರ್ಥ ಸಂಸ್ಥಾಪಕಳಾದಳು. ಆದರೆ ಬ್ರಿಟಿಷರ ರಾಜ್ಯ ಪ್ರತಿನಿಧಿಯಾಗಿ ಸುರಪುರಕ್ಕೆ ಆಗಮಿಸಿದ ಮೊಡೊಸ್ ಟೇಲರ್ ರಾಣಿ ಈಶ್ವರಮ್ಮನ ಅಧಿಕಾರವನ್ನು ಮೊಟಕುಗೊಳಿಸಲು ಪ್ರಯತ್ನಿಸಿದ ಆಗಲು ಶಕ್ತಿ ಮೀರಿ ಪ್ರತಿಬಿಂಬಿಸಿದ ರಾಣಿಯ ಸಾಹಸ ರೋಮಾಂಚಕರವಾದುದು. ಕೊನೆಗೆ ಪತನವಾದ ಸಂಸ್ಥಾನದಲ್ಲಿ ಪ್ರವೇಶಿಸಿದಳು. ನಾಲ್ವಡಿ ವೆಕಂಟಪ್ಪನ ಪುಟ್ಟದರಸಿ ರಾಣಿ ರಂಗಮ್ಮ ನ್ಯಾಯಾಂಗ ವಿಚಾರಣೆಯಲ್ಲಿದ್ದ ತನ್ನ ರಾಜನನ್ನು ಉಳಿಸಿಕೊಳ್ಳಲು ಹಗಲಿರುಳು. ಶ್ರಮಿಸಿದ ಈ ರಾಣಿಯ ಘನತೆ ನಿಜಕ್ಕೂ, ಶ್ಲಾಘನೀಯ. ಅನಾಥ ಜೀವನದಲ್ಲಿ ಅಪ್ರತಿಮ ಹಠವನ್ನು ಪ್ರದರ್ಶಿಸಿದ ರಾಣಿ ರಂಗಮ್ಮಳ ವಿಶೇಷ ವ್ಯಕ್ತಿತ್ವವನ್ನು ರಸ್ತಾಪಾರದಿಂದ ಭೀಮಕವಿ ಹೃದಯಾರೆ ಹೊಗಳಿದ್ದಾನೆ. ಅತ್ತೆಗೆ ತಕ್ಕ ಸೊಸೆ ಎಂದು ಮನತುಂಬಿ ಬಣ್ಣಿಸಿದ್ದಾನೆ. ಅಲ್ಲದೆ ಇದೇ ರಾಜ ವಂಶಕ್ಕೆ ಸೇರಿದ ರಕ್ತಸಂಬಂಧಿಯಾದ ರಾಜಾ ಚನ್ನಪ್ಪನಾಯಕರವರು ೩೦೦೦ ಸಾವಿರ ಎಕರೆ ಜಮೀನನ್ನು ಹೊಂದಿ ಬಡವರ ಪಾಲಿಗೆ ಅನ್ನದಾತರಾಗಿದ್ದರು. ಇವರ ಮರಣ ನಂತರ ಧರ್ಮಪತ್ನಿಯಾದ ರಾಣಿ ಪಾಪಮ್ಮ ಜೆಜಿಯವರು ಕೂಡ ಪತಿಯ ಮಾರ್ಗದಲ್ಲಿಯೇ ನಡೆದು ಧೀನದಲಿತರಿಗೆ, ಬಡವರಿಗೆ, ಭೂಮಿಗಳನ್ನು ದಾನವಾಗಿಟ್ಟುಕೊಟ್ಟು, ಸುರಪುರದ ಜನರ ಮನಸ್ಸಿನಲ್ಲಿ ಅಜರಾಮರರಾಗಿ ಇಂದೂ ಕೂಡ ಉಳಿದಿದ್ದಾರೆ. ಇವರು ವಿಧಿವಶವಾದಾಗ ಅಪಾರ ಜನಸ್ತೋಮವೆ ಕಣ್ಣೀರಿಟ್ಟಿತ್ತು.

ಹೀಗೆ ಸುರಪುರ ಸಂಸ್ಥಾನವು ತನ್ನ ಎರಡು ಸುದೀರ್ಘ ಶತಮಾನಗಳ ಆಳ್ವಿಕೆಯಲ್ಲಿ ಹಲವಾರ ಅಪ್ರತಿಮ ರಾಣಿಯರನ್ನು ಕಂಡಿದೆ ಇಂಥ ಧೀರ ಮಹಿಳೆಯರ ಅಧ್ಯಯನ ಇಂದು ಅತ್ಯಂತ ಅವಶ್ಯಕವಿದೆ. ಸುರಪುರ ಸಂಸ್ಥಾನದ ವೀರರಾಣಿಯರು ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ತಲೆಬರಹ ಅಡಿಯಲ್ಲಿ ಅಧ್ಯಯನ ಮಾಡಿ ಇತಿಹಾಸವನ್ನು ಮನರಂಜಿಸುವ ಅಗತ್ಯ ಇಂದು ಅನಿವಾರ್ಯವಾಗಿದೆ.

# ದೇಶ ಸೇವೆಯಲ್ಲಿ ಸಗರನಾಡಿನ ಬೇಡ ಸಮುದಾಯ

ಉತ್ತರದಲ್ಲಿ ರಜಪೂತರು ಮಧ್ಯದಲ್ಲಿ ಮರಾಠರು ದಕ್ಷಿಣದಲ್ಲಿ ಮತ್ತು ಸಗರನಾಡಿನಲ್ಲಿ ಬೇಡ ನಾಯಕರು ಈ ಮೂರು ಜನಾಂಗಗಳು ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿರುವುದು ಕಂಡುಬರುತ್ತದೆ. ಮುಸ್ಲಿಂಮರಿಂದ ಬ್ರಿಟಿಷರಿಂದ ಗಂಡಾಂತರ ಬಂದಾಗ ಇವರ ತ್ಯಾಗ ಬಲಿದಾನಗಳು ಬಹಳ ಅಸದೃಶ ಒಂದು ವೇಳೆ ಸಗರನಾಡಿನಲ್ಲಿ ಬೇಡರು ಮುಸ್ಲಿಂ ಬ್ರಿಟಿಷರ ವಿರುದ್ಧ ಹೋರಾಡದೆ ಹೊದರೆ ಇಂದು ಹಿಂದುಗಳೆಲ್ಲರು ಮತಾಂತರವಾಗುತ್ತಿದ್ದರು.

ಭಗವದ್ಭಕ್ತರೂ ಗುರುಗಳಿಂದ ಅನುಗ್ರಹಿತರೂ ಆದ ಜನಾಂಗದ ಮುಖಂಡರ ನೇತೃತ್ವದಲ್ಲಿ ರಾಜ್ಯಗಳನ್ನು ಕಟ್ಟಿ ಮನೆಮಠಗಳನ್ನು ಬಿಟ್ಟು ಸರ್ವತ್ಯಾಗ ಮಾಡಿ ಮಹಿಳೆಯರ ಮಾನರಕ್ಷಣೆ, ಪ್ರಜೆಗಳು ಪ್ರಾಣರಕ್ಷಣೆಗೆ ತನ್ಮೂಲಕ ಹಿಂದೂ ಧರ್ಮ ಸಂಸ್ಕೃತಿಗಳ ರಕ್ಷಣೆಗಾಗಿ ಪ್ರಾಣವನ್ನು ಪಣವಾಗಿಟ್ಟು ಹೋರಾಡಿದ ಭಾರತದ ಶಿಷ್ಟ ಜನಾಂಗ ಇವರು. ಬೇರೊಂದು ವೃತ್ತಿಯಿಲ್ಲದೆ ಯೋಧರಾಗಿಯೇ ಇದ್ದುಕೊಂಡು ದೇಶರಕ್ಷಣೆ ಮತ್ತು ಧರ್ಮರಕ್ಷಣೆಯಲ್ಲಿಯೇ ತೊಡಗಿದ್ದ ಸಗರನಾಡಿನ ಬೇಡ ಜನಾಂಗದ ಪ್ರತಿಯೊಬ್ಬನ ಸಂಸಾರದ ಸಂರಕ್ಷಣೆಯನ್ನು ಆಯಾಜನಾಂಗದವರೇ ಆಗಿದೆ. ಆಯಾ ದೇಶದ ದೊರೆಯೆ ಹೊತ್ತಿದ್ದು ಯೊಧರ ಕುಟುಂಬಕ್ಕೆ ಸೇರಿದ ಮಹಿಳೆಯರ ಮಕ್ಕಳ ರಕ್ಷಣೆ ಮತ್ತು ಶ್ರಯೋಭಿವೃದ್ಧಿಯೂ ಕೂಡ ಆಳುವ ದೊರೆಯ ಜವಾಬ್ದಾರಿಯಾಗಿತ್ತು.

ಸಗರನಾಡಿನ ಬೇಡ ಜನಾಂಗದವರು ಭವ್ಯ ಇತಿಹಾಸವನ್ನು ಹೊಂದಿದ್ದರೂ ಭಾರತದಲ್ಲಿಯೇ ಬಹು ಪರಾಕ್ರಮಿಗಳಾಗಿ, ರಾಷ್ಟ್ರವೀರರ ಸಾಲಿನಲ್ಲಿ ಮೆರೆಯಬಹುದಾಗಿದ್ದವ ಇತಿಹಾಸವು ದೇಶದ ಮಕ್ಕಳ ಪರಿಪಾಟಕ್ಕೆ ಅಣಿಯಾಗುವ ಬದಲು ದೂರವಾಗಿದೆ. ಉದಾರಣೆಗೆ ರಾಜಾ ಗಡ್ಡಿಪಿಡ್ಡನಾಯಕ, ಮೊಂಡಗೈ ವೆಂಕಟಪ್ಪನಾಯಕ, ಸ್ವಾತಂತ್ರ್ಯವೀರ ನಾಲ್ವಡಿ ರಾಜ ವೆಂಕಟಪ್ಪನಾಯಕ ಇಂತಹವರ ಹೆಸರುಗಳು ಸುವರ್ಣಾಕ್ಷರಗಳಿಂದ ಚರಿತ್ರೆಗಳ ಪುಟಗಳಲ್ಲಿ ಬೆಳಗಬಹುದಾಗಿತ್ತು. ಅದಾವ ಕಾರಣಕ್ಕಾಗಿಯೋ ಈ ಜನಾಂಗದ ಇತಿಹಾಸವು ತೆರೆಯ ಮರೆಯಲ್ಲಿಯೇ ಇದೆ.

ದೇಹವೆಂಬ ಯಂತ್ರದಲ್ಲಿ ಯಾವುದೊಂದು ಅಂಗವು ಹೀನವಾದರೂ ಹೇಗೆ ಶೋಭಿಸುವುದಿಲ್ಲೊ ಹಾಗೆ ದೇಶವೆಂಬ ಯಂತ್ರದಲ್ಲಿ ಯಾವುದೊಂದು ಜನಾಂಗವು ಹಿಂದುಳಿದರು ಕಟ್ಟೆಯಕಲ್ಲು ಕಿತ್ತಂತೆ, ಆಡಳಿತಯಂತ್ರವು ಸುಗಮವಾಗಿ ಸಾಗುವುದರಲ್ಲಿ ಕಂಟಕಪ್ರಾಯವಾಗಬಹುದು. ಭರತ ಖಂಡದಲ್ಲಿ ಬೃಹತ್ ಪ್ರಮಾಣದಲ್ಲಿ ಈ ಜನಾಂಗದ ಶ್ರೇಯೋಭಿವೃದ್ಧಿಯನ್ನು ದೃಷ್ಟಿಯಲ್ಲಿಕೊಂಡು ಭಾರತ ಸರ್ಕಾರಗಳು ಸರ್ವತೋಮುಖವಾದ ಏಳಿಗೆಯ ಯೋಜನೆಯನ್ನು ಹಾಕಿಕೊಟ್ಟು ಜನಾಂಗದ ಶುಭವನ್ನು ಕೋರಲಿ.

ಸಗರನಾಡಿನ ಬೇಡ ಸಮುದಾಯದ ಬೇಡಗುಗಳು.

| | |
|---|---|
| ೧. ಗುಜ್ಜಲರ್ | ೨. ಗೋಸಲರ್ |
| ೩. ಮಿನಗಲರ್ | ೪. ಬಿಲ್ಲರ್ |
| ೫. ಗಬ್ಬೆಲರ್ | ೬. ರೆಂರಾಲೇರ |
| ೭. ಕುರ್ತಿರ್ | ೮. ಮುಮ್ಮುಡಲವರ್ |
| ೯. ಬಡಕಲರ | ೧೦. ಕಳಿಸಲರ |
| ೧೧. ಕಳಿಸಲರ | ೧೨. ಬೆಲ್ಲೋಲರ |
| ೧೩. ಕೆಂಗಲರ | ೧೪. ಜಿನಗಲರಂ |
| ೧೫. ಮುರ್ತೀರ | ೧೬. ಪಿಂಗಾರ |
| ೧೭. ಮಣಿಗಲರ | ೧೮. ಮಳಗಲರ |
| ೧೯. ಇರಗಾರ | ೨೦. ಚಂಪಲರ |
| ೨೧. ಮನಪೊಲ್ಲಾರ | ೨೨. ಮುದುಗೊಂಡ್ಲರ |
| ೨೩. ಗೊಬ್ಬಿಲರ | ೨೪. ಮಸಗಲ್ಲರ |
| ೨೫. ಪೋತಲರ | ೨೬. ಪೋಲರ |
| ೨೭. ಪುರ್ತಿರ | ೨೮. ಪೋತುಗಳೇರ |
| ೨೯. ಪರಮಾಖರ | ೩೦. ಬರಿಪಿಲರ |
| ೩೧. ಮನ್ನಲರ | ೩೨. ಮೋಗಲ್ಲರ |
| ೩೩. ಭಟ್ಟರ | ೩೪. ಬೋಗಿಲರ |
| ೩೫. ಚಾಡಲರ | ೩೬. ತಳಗಲ್ಲರ |
| ೩೭. ತರಮುಖರ | ೩೮. ಜಂಗಲರ |
| ೩೯. ಬೇಚಲರ | ೪೦. ಮಲ್ಲಗ್ಲರ |

೪೧. ಕೊಣಿಗಲ್

೪೨. ಸಂತಾಲೇರ

೪೩. ಗುಡಗ್ಗೆರ

೪೪. ಕುರ್ಗಲೇರ

೪೫. ಬಂಡಬಲದವರ

೪೬. ಹುಲೇರ

೪೭. ತುರುಮನೆರ

೪೮. ಮರ್ತೆರ

೪೯. ನಲ್ಲೆತಿರ

೫೦. ರಂಟೇಲವರ

೫೧. ದ್ವಿರಕಲ್ಲೆರ

೫೨. ಯುದ್ದಲವರ

೫೩. ದ್ವೊರಿಲವೆರ

೫೪. ಸೊಳ್ಕೆರ

೫೫. ಕರೇಸಲ್ಲರ

೫೬. ಡೇವಕಲ್ಲರ

೫೭. ಗವಲೇರ

೫೮. ಬಾಚಕಲ್ಲೇರ

೫೯. ಕಬ್ಬೆಲರ

೬೦. ಜಕಲರ

೬೧. ತಿರಮುಖರ

೬೨. ಮುತಶೈರ

೬೩. ಪಡಲಿವಲರ

# ಪರಾಮರ್ಶಿತ ಗ್ರಂಥಗಳು ಮತ್ತು ಲೇಖನಗಳು


೧. ಸಗರನಾಡನಾಡ ದರ್ಶನ : ಸ್ಮರಣ ಸಂಚಿಕೆ

೨. ಬೇಡ ಜನಾಂಗದ ಉಗಮ ವಿಕಾಸ : ರಂಗರಾಜ್ ವನದುರ್ಗ

೩. ದಿಲ್ಲಿಯನ್ನು ನಡುಗಿಸಿದ ಸುರಪುರದ ಶಿಸ್ತಿನ ಸೈನ್ಯ

೪. ವಾಲ್ಮೀಕಿ ಕರ್ನಾಟಕ ಪತ್ರಿಕೆ ೨೦೦೮, ೨೦೦೧, ೨೦೦೨

೫. ವಾಲ್ಮೀಕಿ ಸವಿ ಸಂ ಡಾ. ವಿ.ಪೂಜಾರಹಳ್ಳಿ

೬. ರಾಷ್ಟ್ರಸೇವೆಯಲ್ಲಿ ನಾಯಕ ಜನಾಂಗ : ಎಚ್.ವಿ. ವೀರನಾಯಕ

೭. ವಾಲ್ಮೀಕಿ ದರ್ಶನ ಮತ್ತು ಧರ್ಮದರ್ಶನ : ಸಂತ.ಕೆ.ರಂಗದಾಸ್

೮. ವಾಲ್ಮೀಕಿ ಮಂದಾರ

೯. ಮರೆತುಹೋದ ಸುರಪುರ ಇತಿಹಾಸ

೧೦. ಮರೆಯಲಾಗದ ಸುರಪುರ ಇತಿಹಾಸ

೧೧. ಸಂಯುಕ್ತ ಕರ್ನಾಟಕ : ದಿ. ೩೦.೧೧.೧೯೭೫

೧೨. ಸಗರನಾಡಿನ ಶಿವಶರಣರು ಲೇಖನ

೧೩. ಸಗರನಾಡಿನ ಸಮೀಕ್ಷೆ : ಪ್ರೊ. ಬಿ.ಎಸ್. ದೇಶಮುಖರ ಲೇಖನ

೧೪. ವಾಲ್ಮೀಕಿ ಒಂದು ಸುರಪುರ ರಾಜ್ಯ ಆಳಿದ ರಾಮಿಯರು ಡಾ. ಆರ್.ವನದುರ್ಗ

೧೫. ಏಕಲವ್ಯ ವಾರ್ತೆ ಪತ್ರಿಕೆ ೨೦೦೮

೧೬. ವಾಲ್ಮೀಕಿ ಹೊಂಗಿರಣ ಸ್ಮರಣ ಸಂಚಿಕೆ ೧೯೯೮




ಸುರಪುರ ಅರಮನೆ ಮುಂಭಾಗದಲ್ಲಿರುವ 1949 ಆಗಸ್ಟ 15 ಸ್ವಾತಂತ್ರ್ಯ ದಿನಾಚರಣೆಯಲ್ಲಿ ಪಾಲ್ಗೊಂಡಿರುವ ಅರಸರ ಮತ್ತು ಪರಿವಾರದವರು.



ಸುರಪುರ ಬೇಡ ಸಮುದಾಯದವರ ಆರಾಧ್ಯ ದೈವ
ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನ.

ಸುರಪುರದಲ್ಲಿ ಹೀನಾಯಸ್ಥಿತಿಯಲ್ಲಿ ಬದುಕುವ ಬೇಡ ಮಹಿಳೆಯರ-
— ಗುಡಿಸಲುಗಳು.





ಸುರಪುರದಲ್ಲಿ ಹೀನಾಯದ ಸ್ಥಿತಿಯಲ್ಲಿ ಬದುಕುವ ಬೇಡ ಮಹಿಳೆಯರ ಗುಡಿಸಲುಗಳು.

ಸುರಪುರದ ಬೇಡ ಸಮುದಾಯದ [illegible]





ಸಗರನಾಡಿನ ಸುರಪುರದಲ್ಲಿ ಪ್ರತ್ಯೇಕವಾಗಿ ವಾಸಿಸುತ್ತಿರುವ ಬೇಡ ಸಮುದಾಯದವರ ಮನೆಗಳು.

ಶಹಾಪುರದ ಬೇಡ ಸಮುದಾಯದ ಮನೆಗಳು.





ಶಾಹಪುರದ ಬಾಗನಗರಿ ಕೋಟೆಗೋಡೆಗಳಲ್ಲಿ ವಾಸಿಸುತ್ತಿರುವ ಬೇಡ ಸಮುದಾಯದವರ ಮನೆಗಳು.

ಸುರಪುರ ಶ್ರೀ ವೇಣುಗೋಪಾಲ ಸ್ವಾಮಿ ಜಾತ್ರಾ ಚಿತ್ರಣ.





ಸಗರನಾಡಿನ ಸುರಪುರದ ಬೇಡ ದೊರೆಗಳ ಅರಮನೆ.





ಸುರಪುರ ರಾಜರ (ಅರಸರ) ರಾಜಚಿಹ್ನೆ.

ಸುರಪುರದ ರಾಜ ರಾಣಿಯರು ವಾಸಿಸುತ್ತಿದ್ದ ಅರಮನೆಗಳು.





ಕರ್ನಾಟಕ ಕ್ರಾಂತಿವೀರ
ನಾಲ್ವಡಿ ರಾಜಾ ವೆಂಕಟಪ್ಪನಾಯಕ
1857



ಸುರಪುರ ರಾಜ ಕೃಷ್ಣಪ್ಪ ನಾಯಕ (ಸುರಪುರ ಸಂಸ್ಥಾನ)



ನಗರದಲ್ಲಿರುವ ಬೇಡರ ಬೇಟೆ ಮನೆ.

ಧಾರಾಪುರದಲ್ಲಿರುವ ಬ್ರಿಟಿಷರ ಕಾಲದ ಪ್ರವಾಸಿ ಮಂದಿರ





Sword Presented By Bijapur Sultan

ಧಾರಾಪುರದ ದೇಸಾಯರಿಗೆ ಬಿಜಾಪುರ ಸುಲ್ತಾನರು ಕಾಣಿಕೆಯಾಗಿ ನೀಡಿದ ಖಡ್ಗ

"ದೇಶಕ್ಕಾಗಿ ಪ್ರಾಣ ತ್ಯಾಗಮಾಡುವುದು

ಸಾವು ಅಲ್ಲ ಸ್ವರ್ಗ

ವೀರ ಧೀರರು ನಡೆದುಕೊಂಡು ಬಂದ

ಇದುವೇ ರಾಜಮಾರ್ಗ"

# ವಂದೇ ಮಾತರಂ